# ಕಾಸರಗೋಡಿನ ಕನ್ನಡ ಸಾಹಿತ್ಯ - ಒಂದು ಅಧ್ಯಯನ

ಎಂ.ಫಿಲ್ ಪದವಿಯ ಅವಶ್ಯಕತೆಗಾಗಿ

ಕನ್ನಡ ವಿಶ್ವವಿದ್ಯಾಲಯ, ಹಂಪಿಗೆ ಸಾದರ ಪಡಿಸಿದ

ಪ್ರೌಢ ಪ್ರಬಂಧ (2008)

ಸಂಶೋಧನೆ
ಸರಸ್ವತಿ .ಬಿ.

ಮಾರ್ಗದರ್ಶನ
ಡಾ. ಪಾ.ನ.ಮಯ್ಯ

ಕರ್ನಾಟಕ ಥಿಯೋಲಾಜಿಕಲ್ ಸಂಶೋಧನಾ ಕೇಂದ್ರ
ಬಲ್ಮಠ, ಮಂಗಳೂರು

# ಕಾಸರಗೋಡಿನ ಕರ್ನಾಡ ಸಾಹಿತ್ಯ - ಒಂದು ಅಧ್ಯಯನ

ಎಂ.ಫಿಲ್ ಪದವಿಯ ಅವಶ್ಯಕತೆಗಾಗಿ

ಕನ್ನಡ ವಿಶ್ವವಿದ್ಯಾಲಯ, ಹಂಪಿಗೆ ಸಾದರ ಪಡಿಸಿದ

ಪ್ರೌಢ ಪ್ರಬಂಧ (2008)




ಸಂಶೋಧನೆ

ಸರಸ್ವತಿ .ಬಿ.





ಮಾರ್ಗದರ್ಶನ

ಡಾ. ಪಾ.ನ.ಮಯ್ಯ



ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

# ದೃಢೀಕರಣ ಪತ್ರ

ಶ್ರೀಮತಿ ಸರಸ್ವತಿ ಬಿ ಅವರು 'ಕಾಸರಗೋಡಿನ ಕರ್ಹಾಡ ಸಾಹಿತ್ಯ – ಒಂದು ಅಧ್ಯಯನ' ಎಂಬ ಶೀರ್ಷಿಕೆಯ ಈ ಪ್ರೌಢ ಪ್ರಬಂಧವನ್ನು ಎಂ.ಫಿಲ್ ಪದವಿಯ ಆಂಶಿಕ ಅವಶ್ಯಕತೆಗಾಗಿ ಕನ್ನಡ ವಿಶ್ವವಿದ್ಯಾನಿಲಯ ಹಂಪಿಗೆ ಅರ್ಪಿಸಲೆಂದು ನನ್ನ ಸಲಹೆ ಮತ್ತು ಮಾರ್ಗದರ್ಶನದಲ್ಲಿ ಸಿದ್ಧ ಪಡಿಸಿದುದಾಗಿದೆ. ಈ ನಿಬಂಧವು ಸಂಶೋಧಕರು ತಮ್ಮ ಸ್ವಂತ ಸಂಶೋಧನೆಯ ಮೂಲಕ ರೂಪು ಗೊಳಿಸಿದುದಾಗಿದೆ. ಈ ನಿಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಪದವಿಗಾಗಲೀ, ಉದ್ದೇಶಗಳಿಗಾಗಲೀ, ಬಳಸಲಾಗಿಲ್ಲ ಎಂದು ದೃಢೀಕರಿಸುತ್ತೇನೆ.

[ಡಾ. ಪಿ. ನರಸಿಂಹ ಮಯ್ಯ]
ಮುಖ್ಯಸ್ಥರು, ಕನ್ನಡ ವಿಭಾಗ,
ರೋಶನಿ ನಿಲಯ, ಮಂಗಳೂರು - 575 002

ತಾ. 05-10-2008
ಮಂಗಳೂರು

# ಪ್ರಮಾಣ ಪತ್ರ

'ಕಾಸರಗೋಡಿನ ಕರ್ಾಡ ಸಾಹಿತ್ಯ- ಒಂದು ಅಧ್ಯಯನ' ಎಂಬ ಶೀರ್ಷಿಕೆಯ ಈ ಪ್ರೌಢ ಪ್ರಬಂಧವನ್ನು ಎಂ. ಫಿಲ್ ಪದವಿಯ ಆಂಶಿಕ ಅವಶ್ಯಕತೆಗಾಗಿ ಹಂಪಿ, ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಲೆಂದು ನಾನು ಡಾ. ಪಾ. ನ. ಮಯ್ಯ, ಮುಖ್ಯಸ್ಥರು, ಕನ್ನಡ ವಿಭಾಗ, ರೋಶನಿ ನಿಲಯ, ಮಂಗಳೂರು ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಈ ಸಂಶೋಧನಾ ಪ್ರೌಢ ಪ್ರಬಂಧದ ವಿಷಯವನ್ನು ಈ ಮೊದಲು ಯಾವುದೇ ಪದವಿಗಾಗಲೀ ಅಥವಾ ಯಾವುದೇ ಉದ್ದೇಶಗಳಿಗಾಗಲೀ ಬಳಸಿ ಕೊಂಡಿಲ್ಲ ಎಂದು ಘೋಷಿಸುತ್ತೇನೆ.

ಕರ್ನಾಟಕ ತಿಯೊಲಾಜಿಕಲ್ ಸಂಶೋಧನಾ ಕೇಂದ್ರ,
ಬಲ್ಮಠ, ಮಂಗಳೂರು
05-10-2008

(ಸರಸ್ವತಿ. ಬಿ.)

ಪರಿವಿಡಿ

# ಕಾಸರಗೋಡಿನ ಕರ್‍ಹಾಡ ಸಾಹಿತ್ಯ – ಒಂದು ಅಧ್ಯಯನ

## ಅನುಬಂಧ

ಅಧ್ಯಾಯ –೧

# ಅಧ್ಯಯನದ ತಾತ್ವಿಕತೆ

೧.೧. ಪ್ರಸ್ತಾವನೆ:

ಕರ್ನಾಟಕದ ದಕ್ಷಿಣ ಭಾಗ ಮತ್ತು ಕೇರಳದ ಉತ್ತರದಲ್ಲಿ ಕಾಸರಗೋಡು ಇದೆ. ಇದು ತಾಲೂಕು ಮತ್ತು ಜಿಲ್ಲೆ ಎರಡೂ ಆಗಿದೆ. ಇಲ್ಲಿ ತುಳು, ಮಲೆಯಾಳ, ಕೊಂಕಣಿ, ಕನ್ನಡ, ಮರಾಠಿ, ಕರ್ಹಾಡಿ, ಹವ್ಯಕ ಮೊದಲಾದ ನಾನಾ ಭಾಷೆಗಳನ್ನಾಡುವ ಜನಾಂಗಗಳಿವೆ. ಇಲ್ಲಿ ಬಹುತ್ವದ ನೆಲೆಯನ್ನು ಅದರ ಭಾಗವಾದ ಬಹು ಸಂಸ್ಕೃತಿಯನ್ನು ಕಾಣ ಬಹುದಾಗಿದೆ. ಬಹುಧರ್ಮದವರೂ ಇಲ್ಲಿ ನೆಲೆಸಿದ್ದಾರೆ. ಈ ಎಲ್ಲಾ ಜನಾಂಗಗಳೂ ಪರಸ್ಪರ ಅನ್ಯೋನ್ಯತೆ, ಸಾಮರಸ್ಯದಿಂದ ಇರುವುದು ಈ ಕಾಸರಗೋಡು ಭೂಭಾಗದ ವೈಶಿಷ್ಟ್ಯ.

ಕರ್ನಾಟಕದ ದಕ್ಷಿಣ ಕನ್ನಡ ಜಿಲ್ಲೆ ವಿಭಿನ್ನ ಭಾಷೆಗಳನ್ನಾಡುವ ಜನಾಂಗಗಳಿರುವ ಪ್ರದೇಶ. ಇಲ್ಲಿಯ ಒಟ್ಟು ಜನ ಸಂಖ್ಯೆಯಲ್ಲಿ ಕನ್ನಡಿಗರು ಅಲ್ಪಸಂಖ್ಯಾತರು. ಇತರರು ಬಹು ಸಂಖ್ಯೆಯಲ್ಲಿರುವುದು ಗಮನಾರ್ಹ. ಕಾಸರಗೋಡು ಸಹಿತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಈ ಭಾಷಿಕ, ಧಾರ್ಮಿಕ, ಸಾಂಸ್ಕೃತಿಕ, ವೈವಿಧ್ಯಕ್ಕೆ ಒಂದು ಮುಖ್ಯ ಕಾರಣ. ಈ ಪ್ರದೇಶಕ್ಕೆ ಗೋವಾ ಹಾಗೂ ಸುತ್ತಮುತ್ತಲ ಪ್ರದೇಶಗಳಿಂದ ಆದ ವಲಸೆಗಳೆನ್ನಬಹುದು. ವಲಸೆಯಾದ ಜನಾಂಗಗಳು ತಮ್ಮ ಸಂಸ್ಕೃತಿಯ ಹಲವು ಅಂಶಗಳ ಪ್ರಾಚೀನ ರೂಪಗಳನ್ನು ಕಾದಿಟ್ಟು ಕೊಂಡಿರುತ್ತಾರೆ. ಇಂದು ದಕ್ಷಿಣ ಕನ್ನಡದಲ್ಲಿರುವ ಚಿತ್ಪಾವನಿ ಕರ್ಹಾಡಿ ಕೊಂಕಣಿ ಭಾಷೆಗಳನ್ನು ಗೋವಾದ ಅದೇ ಭಾಷೆಗಳ ಜತೆ ಹೋಲಿಸಿದರೆ ದಕ್ಷಿಣ ಕನ್ನಡದಲ್ಲಿರುವ ಭಾಷೆಗಳು ಹಲವಂಶಗಳಲ್ಲಿ ಗೋವಾದವುಗಳಿಗಿಂತ ಪ್ರಾಚೀನ ರೂಪದಲ್ಲಿರುವುದು ಕಂಡು ಬರುತ್ತದೆ.

ಒಂದು ಭಾಷೆಯನ್ನು ಆಡುವ ಹಿನ್ನೆಲೆಯಿಂದ ವ್ಯಕ್ತಿಯ ಜನಾಂಗವನ್ನು ಗುರುತಿಸಲು ಆಗುವುದಿಲ್ಲ. ಕರ್ಹಾಡರು ವಲಸೆ ಬಂದು ನೆಲೆಸಿದ ಕಾಸರಗೋಡು, ಪುತ್ತೂರು, ಮಂಗಳೂರು ಮೊದಲಾದ ಸ್ಥಳಗಳು ಕರ್ನಾಟಕವೂ ಹೌದು, ತೌಳವವೂ ಹೌದು. ಇಲ್ಲಿ ಹೆಚ್ಚಿನವರ ಮನೆ ಮಾತು ತುಳು ಕನ್ನಡ. ಜೊತೆಗೆ ಮಲೆಯಾಳವೂ ಕೊಂಕಣಿಯೂ ಇದೆ. ಅವರೊಡನೆ ವ್ಯವಹರಿಸುವಾಗ, ಅವರವರ ಭಾಷೆಯಲ್ಲೇ ಕರ್ಹಾಡಿಯರೂ ವ್ಯವಹರಿಸಬೇಕಾಗಿ ಬಂತು. ಈಗಲೂ ವ್ಯವಹಾರ ಅದೇ ರೀತಿಯಲ್ಲಿ ನಡೆಯುತ್ತದೆ. ಕರ್ಹಾಡಿಯರು ಹೆಚ್ಚಾಗಿ ಮನೆಯಲ್ಲಿ ಮಾತ್ರ ಸಜಾತಿಯರೊಡನೆ ತಮ್ಮ ಭಾಷೆಯಲ್ಲಿ ಮಾತನಾಡುತ್ತಾರೆ. ಮನೆಯ ಹೊರಗೆ ಕನ್ನಡ, ತುಳು, ಮಲೆಯಾಳಗಳಲ್ಲಿ ಮಾತನಾಡುತ್ತಾರೆ. ಮಕ್ಕಳ ವಿದ್ಯಾಭ್ಯಾಸ ಕನ್ನಡದಲ್ಲಿ ನಡೆಯುತ್ತದೆ. ರಾಜ್ಯ ಭಾಷೆಯೂ ಕನ್ನಡವೇ ಆದ ಕಾರಣ ಕರ್ಹಾಡಿ ಕೇವಲ ಮನೆಯೊಳಗಿನ ಭಾಷೆಯಾಗಿ ಬೆಳೆದು ಬಂತು. ಆದರೆ ಕಾಸರಗೋಡಿನ, ಅಗಲ್ಪಾಡಿ, ಪಡ್ರೆ, ಬಾಯಾರು, ನಿಡ್ಪಳ್ಳಿ ಮೊದಲಾದೆಡೆಗಳಲ್ಲಿ ಕರ್ಹಾಡರ ಮನೆಗಳೇ ಹೆಚ್ಚಾಗಿದ್ದು ಭಾಷೆ ಬೆಳೆಯಲು ಅವಕಾಶವಾಯಿತು.

ಆದರೆ ಬೇರೆ ಕಡೆ ನೆಲಸಿರುವ ಕರ್ಹಾಡರು ಸ್ಥಳೀಯ ಭಾಷೆಗಳನ್ನು ಮಾತೃ ಭಾಷೆಯಾಗಿ ಸ್ವೀಕರಿಸಿದ್ದಾರೆ. ಉತ್ತರ ಕನ್ನಡದ ಒಳ ಭಾಗದಲ್ಲಿರುವವರು ಕನ್ನಡ ಮಾತ್ರ ಮಾತನಾಡುತ್ತಾರೆ. ಕೇರಳದಲ್ಲಿರುವವರು ಮಲೆಯಾಳ ಮಾತನಾಡುತ್ತಾರೆ. ಇನ್ನು ಕೆಲವು ಪ್ರದೇಶಗಳಲ್ಲಿರುವವರು ಮರಾಠಿ ಮಾತನಾಡುತ್ತಾರೆ.

ಪುತ್ತೂರು, ಕಾಸರಗೋಡು, ನಿಡ್ಪೊಳ್ಳಿ ಮೊದಲಾದೆಡೆ ಕರ್ಹಾಡ ಭಾಷೆ ಮಾತನಾಡುವವರ ಮನೆಗಳು ಹೆಚ್ಚು ಕಡಿಮೆ ಎರಡು ಸಾವಿರದಷ್ಟಿದ್ದು ಸಾಮಾನ್ಯ ಹದಿನಾಲ್ಕು ಸಾವಿರಕ್ಕಿಂತ ಹೆಚ್ಚಿನ ಜನಸಂಖ್ಯೆ

ಇರಲಾರದೆಂದು ಅಭಿಪ್ರಾಯವಿದೆ. ಹಾಗೆಯೇ ಮರಾಠಿ ಮಾತನಾಡುವ ಕರ್ಹಾಡರ ಮನೆಗಳು ನೂರ ಮೂವತ್ತೈದರಷ್ಟಿದ್ದು ಸಾಮಾನ್ಯ ಸಾವಿರದಷ್ಟು ಜನಸಂಖ್ಯೆ ಇರಬಹುದು ಎನ್ನುತ್ತಾರೆ. ಕಾಸರಗೋಡಿನ ಕರ್ಹಾಡರ ಮಾತೃ ಭಾಷೆ ಕರ್ಹಾಡಿ. ಈ ಕರ್ಹಾಡಿ ಭಾಷೆಯಲ್ಲಿ ಲಿಖಿತ ಮತ್ತು ಅಲಿಖಿತ ಸಾಹಿತ್ಯವಿದೆ. ಅಲಿಖಿತ ಸಾಹಿತ್ಯಾಧ್ಯಯನದಲ್ಲಿ ಕ್ಷೇತ್ರ ಕಾರ್ಯಕ್ಕೆ ಪ್ರಮುಖ ಸ್ಥಾನವಿದೆ. ಒಂದು ಜನಾಂಗಕ್ಕೆ ಸಂಬಂಧಿಸಿದ ಹಾಗೆ ಮಾಹಿತಿಗಳನ್ನು ಸಂಗ್ರಹಿಸಬೇಕಾಗುತ್ತದೆ. ಜನಾಂಗಿಕ ಅಧ್ಯಯನದಲ್ಲಿ ಜನರ ಲೋಕದೃಷ್ಟಿಗೆ ವಿಶಿಷ್ಟವಾದ ಸ್ಥಾನವಿದೆ.

ಒಂದು ನಿರ್ದಿಷ್ಟ ಜನ ಸಮುದಾಯದ ಸಾಹಿತ್ಯ, ಸಂಸ್ಕೃತಿ, ಸಾಮಾಜಿಕ ಆಚರಣೆಗಳು, ಸಂಪ್ರಯದಾಯಗಳು, ನಂಬಿಕೆಗಳು ಆ ಜನಾಂಗದ ಅಧ್ಯಯನಕ್ಕೆ ಮುಖ್ಯ ಆಕರವಾಗಿ ಪರಿಭಾವಿಸಲಾಗುತ್ತಿದೆ. ಜನಪದ ಸಾಹಿತ್ಯವು ಒಂದು ಜನಾಂಗದ ಬದುಕಿನ ಚಿತ್ರಣವನ್ನು ನೀಡುತ್ತದೆ. ತಮ್ಮ ಬದುಕಿನ ಹಲವು ಮುಖಗಳನ್ನು ಅವರು ನಡೆಸಿರಬಹುದಾದ ಚಿಂತನೆಗಳನ್ನು ಪರಿಭಾವಿಸಲು ಜನಪದ ಸಾಹಿತ್ಯ ಸಮರ್ಥವಾಗಿದೆ. ಈ ದೃಷ್ಟಿಯಿಂದ ಕರ್ಹಾಡ ಭಾಷೆಯಲ್ಲಿರುವ ಸಾಹಿತ್ಯವನ್ನು ಮುಖ್ಯವಾಗಿರಿಸಿಕೊಂಡು ಆ ಸಾಹಿತ್ಯದ ಮೂಲಕ ಕರ್ಹಾಡ ಜನಾಂಗ ಬದುಕನ್ನು ಪರಿಭಾವಿಸಿದ ರೀತಿಯನ್ನು ವಿಶ್ಲೇಷಿಸಲು ಪ್ರಯತ್ನಿಸಿದ್ದೇನೆ. ಜಾನಪದ ಇಲ್ಲವೇ ಸಂಸ್ಕೃತಿ ಅಧ್ಯಯನದ ವ್ಯಾಪ್ತಿ ವಿಸ್ತಾರವಾದುದು. ಇದನ್ನು ಅಧ್ಯಯನದ ದೃಷ್ಟಿಯಿಂದ ಜನಪದ ಸಾಹಿತ್ಯ, ಭೌತಿಕ ಸಂಸ್ಕೃತಿ, ಸಾಮಾಜಿಕ ಆಚರಣೆಗಳು ಮತ್ತು ಹಬ್ಬಗಳು, ರಂಗ ಪ್ರದರ್ಶನ ಕಲೆಗಳು ಎಂದು ವರ್ಗೀಕರಿಸಬಹುದು. ಪ್ರಸ್ತುತ ಅಧ್ಯಯನಕ್ಕೆ ಎತ್ತಿಕೊಂಡಿರುವ ಕರ್ಹಾಡ ಸಾಹಿತ್ಯದಲ್ಲಿ ಬಾಯ್ದೆರೆಯ ಸಾಹಿತ್ಯವು ಜನಪದ ಸಾಹಿತ್ಯದಲ್ಲಿ ಬರುತ್ತದೆ. ಕರ್ಹಾಡ ಜನಪದ ಸಾಹಿತ್ಯವನ್ನು ಗದ್ಯಪದ್ಯ ಎಂಬುದಾಗಿ ವಿಭಾಗಿಸಬಹುದು. ಪದ್ಯ ಭಾಗದಲ್ಲಿ ಬರುವ ಕರ್ಹಾಡ ಮೌಖಿಕ ಸಾಹಿತ್ಯದಲ್ಲಿ ಶೋಭಾನೆ ಹಾಡುಗಳು, ಶಿಶು ಗೀತೆಗಳು, ಜೋಗುಳ ಹಾಡುಗಳು ಎಂಬುದಾಗಿ ಬೇರೆ ಬೇರೆ ಪ್ರಕಾರಗಳನ್ನು ಗುರುತಿಸಬಹುದು. ಗದ್ಯ ಭಾಗದಲ್ಲಿ ಗಾದೆಗಳು, ಒಗಟುಗಳು, ಅಜ್ಜಿ ಕತೆಗಳು ಹಾಗೆ ವಿವಿಧ ರೀತಿಯ ಪ್ರಕಾರಗಳನ್ನು ಅಧ್ಯಯನಕ್ಕೆ ಬಳಸಿ ಕೊಂಡಿದ್ದೇನೆ.

ಜಾನಪದ ಅಧ್ಯಯನದಲ್ಲಿ ಸಾಮಾಜಿಕ ಸಂಪ್ರದಾಯಗಳೆಂಬ ವರ್ಗದಲ್ಲಿ ಜೀವನಾವರ್ತನ ಮತ್ತು ವಾರ್ಷಿಕಾ ವರ್ತನಾಚರಣೆಗಳೆಂಬ ಅಂಗಗಳಿವೆ. ಮಗುವಿನ ಹುಟ್ಟು, ತೊಟ್ಟಿಲಲ್ಲಿಡುವುದು, ನಾಮಕರಣ, ಗಂಡು ಮಗುವಾಗಿದ್ದರೆ ಚೌಲ, ಹೆಣ್ಣು ಮಗುವಾಗಿದ್ದರೆ ಮೈನೆರೆಯುವುದು, ಹೆಣ್ಣು ನೋಡುವುದು, ಮದುವೆ, ಸೀಮಂತ, ಬಾಣಂತನ, ಮರಣ ಹೊಂದಿದಾಗಿನ ಸಂದರ್ಭದಲ್ಲೆಲ್ಲಾ ಕೆಲವು ವಿಶಿಷ್ಟ ಆಚರಣೆಗಳನ್ನು ಮಾಡಲಾಗುತ್ತದೆ. ಇಂತಹ ಆಚರಣೆಗಳೆಲ್ಲಾ ಬದುಕಿನಲ್ಲಿ ಒಮ್ಮೆ ಮಾತ್ರ ನಡೆಯುತ್ತದೆ. ಇವು ಜೀವನಾವರ್ತನ ಆಚರಣೆಗಳಾಗಿವೆ. ಇವು ನಿರ್ದಿಷ್ಟ ಆಶಯಕ್ಕೆ ಬದ್ಧವಾಗಿರುತ್ತವೆ. ಇವುಗಳು ಕರ್ಹಾಡ ಜನಾಂಗದಲ್ಲಿ ಹೇಗೆ ಆಚರಣೆಯಲ್ಲಿವೆ ಎನ್ನುವ ವಿಶ್ಲೇಷಣೆಯನ್ನು ಅಧ್ಯಯನದಲ್ಲಿ ಬಳಸಿ ಕೊಳ್ಳಲಾಗಿದೆ.

ಕರ್ಹಾಡ ಸಾಹಿತ್ಯದ ಜೊತೆಗೆ ಇತರ ಬ್ರಾಹ್ಮಣ ಸಾಹಿತ್ಯದ ಅಧ್ಯಯನವನ್ನು ಪರಿಶೀಲಿಸಿದಾಗ ಕರ್ಹಾಡ ಸಾಹಿತ್ಯವನ್ನಾಗಲಿ, ಸಂಸ್ಕೃತಿಯನ್ನಾಗಲಿ ವೈಜ್ಞಾನಿಕ ದೃಷ್ಟಿಯಿಂದ ಅಧ್ಯಯನ ಮಾಡಿದಂತೆ ಕಂಡು ಬರುವುದಿಲ್ಲ. ಈ ಕರ್ಹಾಡರು ಯಾರು? ಇವರೆಲ್ಲಿಂದ ಬಂದರು? ಯಾಕಾಗಿ ಬಂದರು? ಇವರ ಭಾಷೆ ಯಾವುದು? ಮುಂತಾದ ಪ್ರಶ್ನೆಗಳಿಗೆ ಸಂಬಂಧಿಸಿದಂತೆ ಉತ್ತರವನ್ನು ಹುಡುಕುವ ಪ್ರಯತ್ನ ಮಾಡಲಾಗಿದೆ.

ಕರ್ಹಾಡಿ, ಕೊಂಕಣಿ, ಮರಾಠಿ ಇವೆಲ್ಲ ಸಹೋದರಿ ಭಾಷೆಗಳು ಇವುಗಳ ಆಕಾರ ರೂಪ, ಧ್ವನಿಗಳಲ್ಲಿ ವ್ಯತ್ಯಾಸ ಕಡಿಮೆ. ಹತ್ತಿರದ ಸಂಬಂಧವಿದೆ. ಸಾಕಷ್ಟು ಭೇದ ಇದೆ. ಉಚ್ಚರಿಸುವಾಗ, ಬರೆಯುವಾಗ, ಕೊಂಕಣಿ ಯಾವುದು , ಮರಾಠಿ ಯಾವುದು ಕರ್ಹಾಡಿ ಯಾವುದೆಂದು ಕಂಡು ಕೊಳ್ಳಲು ಸಾಧ್ಯವಿದೆ.

ಭಾಷೆಯನ್ನಾಡುವ ಜನಸಂಖ್ಯೆ ಕಮ್ಮಿ ಇದ್ದು ಎಲ್ಲರೂ ಮಾತನಾಡುವುದರಿಂದ, ಬರೆಯುವುದರಿಂದ ಭಾಷೆಯು ಬೆಳೆಯುವುದಿಲ್ಲ. ಶುದ್ಧೀಕರಣ ಗೊಂಡು ಗ್ರಾಂಥಿಕವಾದಾಗ ಭಾಷೆ ಬೆಳೆಯುತ್ತದೆ. ಕರ್ಹಾಡ ಭಾಷೆಯಲ್ಲಿ ಗ್ರಾಂಥಿಕ ಸಾಹಿತ್ಯ ಸ್ವಲ್ಪ ಮಟ್ಟಿಗೆ ಇದೆ. ವಿವರಣೆ ವಿಶ್ಲೇಷಣೆಯ ಮೂಲಕ ಗ್ರಾಂಥಿಕ ಸಾಹಿತ್ಯವನ್ನು ಅಧ್ಯಯನ ಮಾಡಲಾಗಿದೆ. ಕರ್ಹಾಡಿ ಭಾಷೆಯ ವಾಕ್ಯಗಳು ಬಂದಾಗ ಸೀಮಿತ ವಾಕ್ಯಗಳಿಗೆ ಅನುವಾದ ತಿಳಿಸಿ ವಿವರಣೆಯನ್ನು ಕೊಡಲಾಗಿದೆ.

ಕ್ಷೇತ್ರ ಕಾರ್ಯದ ಮೂಲಕ ಸಂಗ್ರಹಿಸಿದ ಜನಪದ ಸಾಹಿತ್ಯದ ವಿವರಣೆಯನ್ನು ತಿಳಿಸಿ ವಿಶ್ಲೇಷಿಸುವ ಕಾರ್ಯವನ್ನು ಕೈಗೊಂಡಿದ್ದೇನೆ. ಕಾಸರಗೋಡು ಪ್ರದೇಶದ ಕರ್ಹಾಡರು ತಮ್ಮ ಸಾಂಪ್ರದಾಯಿಕ ಆಚರಣೆಗಳನ್ನು ಈಗಲೂ ಅನುಸರಿಸುತ್ತಿರುವುದನ್ನು ಗುರುತಿಸಿದ್ದೇನೆ. ಇವುಗಳ ಸ್ವರೂಪವನ್ನು ಈ ಕೃತಿಯಲ್ಲಿ ಅಧ್ಯಯನ ಮಾಡಿದ್ದೇನೆ.

### ೧.೨. ಕರ್ಹಾಡರ ಇನ್ನಿತರ ಭಾಷೆಯ ಸಾಹಿತ್ಯಗಳು :

ಕರ್ಹಾಡರ ಭಾಷೆಯಲ್ಲಿ ಯಾವುದೇ ಸುಪ್ರಸಿದ್ಧ ಕಾವ್ಯವಾಗಲೀ ಇನ್ನಿತರ ಕೃತಿಗಳಾಗಲಿ ಪ್ರಕಟವಾಗಿಲ್ಲ. ಕರ್ಹಾಡರು ಸಾಹಿತ್ಯ ಕೃಷಿಯನ್ನು ಸಂಸ್ಕೃತ ಮತ್ತು ಕನ್ನಡದಲ್ಲಿ ಮಾಡುತ್ತಿದ್ದರು. ಸ್ವಾತಂತ್ರ್ಯ ಪೂರ್ವದಲ್ಲಿ ಕರ್ಹಾಡ ಜನಾಂಗ ವರ್ಗದಲ್ಲಿ ಹೆಚ್ಚಿನವರು ಸಂಸ್ಕೃತ, ಕನ್ನಡ ಸಾಹಿತ್ಯವನ್ನು ಅಭ್ಯಾಸ ಮಾಡಿದವರು. ವಾಲ್ಮೀಕಿ, ವ್ಯಾಸ, ಕಾಳಿದಾಸ ಮುಂತಾದ ಸಂಸ್ಕೃತ ಕವಿಗಳ ಕುಮಾರ ವ್ಯಾಸ, ಲಕ್ಷ್ಮೀಶ, ಪಾರ್ತಿಸುಬ್ಬ ಮೊದಲಾದ ಕನ್ನಡ ಕವಿಗಳ ಅಧ್ಯಯನ, ಅಭ್ಯಾಸದಲ್ಲಿ ತಮ್ಮನ್ನು ತೊಡಗಿಸಿಕೊಂಡ ಹಲವು ವಿದ್ವಾಂಸರಿದ್ದರು. ಅವರಲ್ಲಿ ಖಂಡೇರಿ ಅನಂತ ಶಾಸ್ತ್ರಿಗಳು ಸಂಸ್ಕೃತದಲ್ಲಿ 'ಅಂಗಲ್ಪಾಡಿ ಮಹಾತ್ಮ್ಯಂ' ಎಂಬ ಕೃತಿಯನ್ನು ರಚಿಸಿದ್ದಾರೆ. ಚಾಂಗೂಳಿ ಸುಬ್ರಾಯ ಶಾಸ್ತ್ರಿಗಳು ಬರೆದ 'ಸುಕನ್ಯಾಚವನಂ' ಎಂಬ ಸಂಸ್ಕೃತ ನಾಟಕವು ಆಂಧ್ರ ವಿಶ್ವವಿದ್ಯಾಲಯದ ಮೂಲಕ ಪ್ರಕಟವಾಗಿದೆ. ಪಡ್ರೆ ಶ್ರೀಪತಿ ಶಾಸ್ತ್ರಿಗಳು ಸರ್ವ ಶ್ರೇಷ್ಠ ಯಕ್ಷಗಾನ ಅರ್ಥಧಾರಿಗಳು. ಪಡ್ರೆ ಕೇಶವ ಶಾಸ್ತ್ರಿಗಳು ಆಶು ಕವಿಗಳಾಗಿದ್ದು ಹಲವು ಪದ್ಯಗಳನ್ನು ಕನ್ನಡದಲ್ಲಿ ಹೇಳಿದ್ದಾರೆ. ಇವರೆಲ್ಲ ಸ್ವಪ್ರಯತ್ನದಿಂದ ಸಂಸ್ಕೃತಾಭ್ಯಾಸ ಮಾಡಿ ಲೋಕಾನುಭವಗಳಿಂದ ಜ್ಞಾನರಾಶಿಯನ್ನು ತಮ್ಮದಾಗಿಸಿಕೊಂಡವರು. ಕೆಲವರು ವ್ಯಾಕರಣ, ಸಾಹಿತ್ಯಗಳಲ್ಲಿ ಶಿಕ್ಷಣವನ್ನು ಪೂರೈಸಿ ಕವಿ, ನಾಟಕಕಾರರಾಗಿ, ಉತ್ತಮ ವಿಮರ್ಶಕರಾಗಿ ಹೆಸರು ಗಳಿಸಿದವರು. ಇವರ ಸಾಹಿತ್ಯ ಕೃತಿಗಳೆಲ್ಲ ರಚನೆಯಾದುದು ಸಂಸ್ಕೃತ ಭಾಷೆಯಲ್ಲಿ.

ಸ್ವಾತಂತ್ರ್ಯಾ ನಂತರದ ಕರ್ಹಾಡರಲ್ಲಿ ಹೆಚ್ಚಿನವರು ಕನ್ನಡ ಭಾಷೆಯಲ್ಲಿ ಸಾಹಿತ್ಯ ರಚನೆ ಮಾಡಿದ್ದಾರೆ. ಕಡಂದೇಲು ವೆಂಕಟರಮಣ ಭಟ್ಟ, ಕಡಂದೇಲು ವಾಸುದೇವ ಭಟ್ಟ, ಉದ್ದಗಳ ಕೃಷ್ಣ ಭಟ್ಟ ಮೊದಲಾದವರಲ್ಲದೆ ಹಾರ್ನಾಡು ಪದ್ಮನಾಭ ಭಟ್ಟ ಇವರ 'ಸಾರಂಗ ರಂಗ' ಎಂಬ ಹೊಸಗನ್ನಡ ಷಟ್ಪದಿ ಕಾವ್ಯವು ಪ್ರಕಟವಾಗಿದೆ. ಶ್ರೀಕೃಷ್ಣ ಚೆನ್ನಂಗೋಡು, ಪೆರ್ಲ ಕೃಷ್ಣ ಭಟ್, ಡಾ। ಡಿ. ಸದಾಶಿವ ಭಟ್, ಡಾ। ಶಿವರಾಮ ಪಡಿಕ್ಕಲ್ ಮಾ. ಭ ಪೆರ್ಲ ಮೊದಲಾದವರು ಕನ್ನಡದಲ್ಲಿ ಸಾಹಿತ್ಯ ಕೃತಿಗಳನ್ನು ರಚಿಸಿದ್ದಾರೆ.

'ತೌಳವ ವಾಲ್ಮೀಕಿ' ಎಂದು ಕೀರ್ತಿ ಪಡೆದ ಮಂದಾರ ಕೇಶವ ಭಟ್ಟರು ತುಳು ಮಹಾಕಾವ್ಯ 'ಮಂದಾರ ರಾಮಾಯಣ'ವನ್ನು ತುಳುವಿನಲ್ಲಿ ಬರೆದಿದ್ದಾರೆ. ಅವರು ಕನ್ನಡದಲ್ಲಿ ವಿದ್ವಾಂಸರು, ಯಕ್ಷಗಾನ ಭಾಗವತರೂ, ಅರ್ಥಧಾರಿಗಳೂ, ಆಗಿದ್ದರು. ಅವರ 'ಬೀರದ ಬೊಲ್ಪು' ಒಂದು ಉತ್ತಮ ಕಾವ್ಯ. ಕವನ ಸಂಕಲನ, ಯಕ್ಷಗಾನ ಪ್ರಸಂಗಗಳೂ, ಅನುವಾದ ಕೃತಿಗಳೆಲ್ಲ ಅವರಿಂದ ರಚನೆಯಾಗಿದೆ. ಅಪ್ರಕಟಿತ ಕೃತಿಗಳೂ ಅವರ ಸಂಗ್ರಹದಲ್ಲಿದೆ. ಇಲ್ಲಿ ಕರ್ಹಾಡ ಸಾಹಿತ್ಯದ ಅಧ್ಯಯನವೇ ಮುಖ್ಯವಾದರೂ ಕರ್ಹಾಡರು ಇತರ ಭಾಷೆಯಲ್ಲಿ ಅದರಲ್ಲೂ ಮುಖ್ಯವಾಗಿ ಸಂಸ್ಕೃತ, ಕನ್ನಡ, ತುಳು ಭಾಷೆಯಲ್ಲಿ ವಿದ್ವಾಂಸರಾಗಿದ್ದು ಅವರ ಸಾಹಿತ್ಯ ಸೇವೆಯನ್ನು ಉಲ್ಲೇಖಿಸಿದ್ದೇನೆ.

೧.೩ ಕರ್ಹಾಡ ಭಾಷೆಯ ಕಾವ್ಯಗಳು ಮತ್ತು ಅವುಗಳ ಪ್ರಕಾರಗಳು:

ಕರ್ಹಾಡ ಭಾಷೆಯಲ್ಲಿ ಪ್ರಪ್ರಥಮ ಸಾಹಿತ್ಯ ರಚನೆಗೆ ತೊಡಗಿದವರೆಂದರೆ ಪಡ್ರೆ 'ಗುರು ಶ್ರೀಪತಿ ಶಾಸ್ತ್ರಿಗಳು 'ಪ್ರಹ್ಲಾದ ಚರಿತ್ರೆ' ಎಂಬ ಗದ್ಯ ಪದ್ಯ ಮಿಶ್ರಿತ ಚಂಪೂಕಾವ್ಯ, 'ಸ್ವಾಗತ ಗೀತೆ', ಹೊರೆತು ಬ್ಯಾಸರ್ಲಂ ಗಾಂದ್ರ್ಯ (ಮದುಮಗ ಹೊರಡುವ ಶೋಭಾನೆ ಹಾಡು) ಮತ್ತು ಬಾಗಿಲ ಅಡ್ವೈಲ್ಲಂ ಗಾಂದ್ರ (ಬಾಗಿಲನ್ನು ತಡೆಯುವ ಹಾಡು) ಎಂಬ ಶೋಭಾನೆ ಹಾಡುಗಳು ಇವರ ಮಹತ್ವದ ರಚನೆಗಳಾಗಿವೆ. ಈ ಶೋಭಾನೆ ಹಾಡುಗಳು ಬಾಯ್ದೆರೆಯಾಗಿ ಪ್ರಚಾರ ಗೊಂಡು ಇಂದಿಗೂ ಕೆಲವರಿಗೆ ಕಂಠಸ್ಥವಾಗಿದೆ.

ಈ ಬಾಯ್ದೆರೆಯ ಸಾಹಿತ್ಯವನ್ನು ವಿದ್ವಾನ್ ಪೆರ್ಲ ಕೃಷ್ಣ ಭಟ್ಟರು ಸಂಗ್ರಹಿಸಿ 'ಕರ್ಹಾಡ ಸ್ಮರಣ ಸಂಚಿಕೆ' ೧೯೮೬ ರಲ್ಲಿ ಪ್ರಕಟಿಸಿದ್ದಾರೆ. ಈ ಸಂಚಿಕೆಯಲ್ಲಿ ಕರ್ಹಾಡ ಜನಾಂಗ ಹಾಗೂ ಕರ್ಹಾಡ ಭಾಷೆಯ ಕುರಿತು ಮಾಹಿತಿಗಳನ್ನು ನೀಡುವ ವಿಮರ್ಶಾತ್ಮಕ ಲೇಖನಗಳು ಪ್ರಕಟವಾಗಿವೆ.

"ಕರ್ಹಾಡ ರಜತ" ವೆಂಬ ರಜತ ಮಹೋತ್ಸವ ಸ್ಮರಣ ಸಂಚಿಕೆಯು ೨೦೦೧ ರಲ್ಲಿ ಬಿಡುಗಡೆಯಾಗಿದೆ. ಈ ಕೃತಿಯಲ್ಲಿ ಕರ್ಹಾಡರ ಬಗ್ಗೆ, ಕರ್ಹಾಡರ ಭಾಷೆಯ ಬಗ್ಗೆ, ಕರ್ಹಾಡ ಸಂಸ್ಕೃತಿ, ಆಚಾರ ವಿಚಾರದ ಬಗ್ಗೆ ಬೆಳಕು ಚೆಲ್ಲುವ ಲೇಖನಗಳಿವೆ. "ಕರ್ಹಾಡ ಸೌಹಾರ್ದ ಸಂದೇಶ"ವೆಂಬ ಕೃತಿ ೧೯೯೯ ರಲ್ಲಿ ಹೊರಬಂದಿದೆ. ಇದರಲ್ಲಿ ಕರ್ಹಾಡ ಭಾಷೆಯ ಸಾಹಿತ್ಯ ಪ್ರಕಟವಾಗಿದೆ. 'ಕರ್ಹಾಡ' ಮಾಸ ಪತ್ರಿಕೆಯು ೨೦೦೧ ರಿಂದ ನಿರಂತರ ಪ್ರಕಟವಾಗುತ್ತಿದೆ. ಈ ಪತ್ರಿಕೆಯಲ್ಲಿ ಕನ್ನಡ, ಕರ್ಹಾಡ ಭಾಷೆಗೆ ಸಂಬಂಧಿಸಿದಂತೆ ಲೇಖನಗಳು ಪ್ರಕಟವಾಗುತ್ತಿದೆ. 'ಕರಾಡೆ ಬ್ರಾಹ್ಮಣರು' ಎಂಬ ಕೃತಿಯು ೧೯೯೭ ರಲ್ಲಿ ಪ್ರಕಟವಾಗಿದೆ. ಇದನ್ನು ಡಾ। (ಶ್ರೀಮತಿ) ಶ್ರೀ ಶ್ರೀರಾಮ ಹೆರ್ಲೇಕರ ಅವರು ಬರೆದಿದ್ದಾರೆ. ಡಾ। ಡಿ. ಸದಾಶಿವ ಭಟ್ ಅವರ "ಕರ್ಹಾಡ ಬ್ರಾಹ್ಮಣರು- ಒಂದು ಅಧ್ಯಯನ" ಎಂಬ ಉದ್ಗ್ರಂಥವು ೨೦೦೮ ರಲ್ಲಿ ಮುದ್ರಣವನ್ನು ಕಂಡಿದೆ. ಕರ್ಹಾಡ ಜನಾಂಗದ ಇತಿಹಾಸದ ಮೇಲೆ ಬೆಳಕು ಚೆಲ್ಲುವ ಕೃತಿ ಇದು. ಹಾಗಾಗಿ ಲಬ್ಧ ಕರ್ಹಾಡ ಸಾಹಿತ್ಯದ ಅಧ್ಯಯನವನ್ನು ಮಾಡುವಾಗ ಕ್ಷೇತ್ರ ಕಾರ್ಯಕ್ಕೆ ಹೆಚ್ಚಿನ ಒತ್ತನ್ನು ಕೊಟ್ಟಿದ್ದೇನೆ. ಕರ್ಹಾಡ ಜನಾಂಗದವರು ಸೇರುವ ಜಾಗಕ್ಕೆ ಸ್ವತ: ಬೇಟಿ ನೀಡಿ ಮಾಹಿತಿಯನ್ನು ಕಲೆ ಹಾಕಿದ್ದೇನೆ. ಲಿಖಿತ ಪ್ರಶ್ನಾವಳಿಯನ್ನು ತಯಾರು ಮಾಡಿ ಕ್ಷೇತ್ರ ಕಾರ್ಯ ಮಾಡಿದ್ದುದರ ಫಲವಾಗಿ ಹಲವಾರು ಗಾದೆಗಳು, ಒಗಟುಗಳು, ಶೋಭಾನೆ ಹಾಡುಗಳು, ಕಥೆಗಳು, ಶಿಶುಗೀತೆಗಳು, ಜೋಗುಳ ಹಾಡುಗಳು ಮೊದಲಾದುವನ್ನು ಸಂಗ್ರಹಿಸಿ ಈ ಪ್ರಬಂದದಲ್ಲಿ ಅವುಗಳ ವಿಶ್ಲೇಷಣೆಯನ್ನು ವಿಮರ್ಶಾತ್ಮಕವಾಗಿ ಮಾಡಿದ್ದೇನೆ.

ಕಾಸರಗೋಡಿನ ಕರ್ಹಾಡ ಜನಾಂಗದವರು ಅಗಲ್ಪಾಡಿ, ತೈರೆ, ಪಡ್ರೆ, ಬಾಯೂರು, ಸುಳ್ಯ, ನಿಡ್ಪಳ್ಳಿ ಊರುಗಳಲ್ಲಿ ಬಹು ಸಂಖ್ಯೆಯಲ್ಲಿದ್ದಾರೆ. ವೃತ್ತಿಯಲ್ಲಿ ಅವರು ಕೃಷಿಕರು. ಸಂಸ್ಕೃತ, ವೇದ ಜ್ಯೋತಿಷ್ಯ, ಆಯುರ್ವೇದ, ಮಂತ್ರವಾದ, ಪೌರೋಹಿತ್ಯ ಮುಂತಾದ ಪ್ರಾಕ್ತನ ವಿದ್ಯೆಯಲ್ಲಿ ಅವರು ಪರಿಣತರಾಗಿದ್ದಾರೆ. ಅವರ ಮುಂದಿನ ತಲೆಮಾರು ಕೃಷಿಯೊಂದಿಗೆ ಅವಿನಾಭಾವ ಸಂಬಂಧವನ್ನು ಹೊಂದಿದೆ. ಕೃಷಿ ಕಾರ್ಯದೊಂದಿಗೆ ಸಾಹಿತ್ಯ ರಚನೆಯನ್ನೂ ಕರ್ಹಾಡ ಭಾಷೆಯಲ್ಲಿ ರಚಿಸುತ್ತಿದ್ದಾರೆ. ಇವರು ರಚಿಸಿದ ಚುಟುಕುಗಳು, ನಾಟಕಗಳು, ಕವನಗಳನ್ನು ಕರ್ಹಾಡ ಸಾಹಿತ್ಯದಲ್ಲಿ ಅಧ್ಯಯನ ಮಾಡಿ ವಿಶ್ಲೇಷಿದ್ದೇನೆ.

ಕನ್ನಡ ಭಾಷೆಯಂತೆ ಕರ್ಹಾಡ ಭಾಷೆಯಲ್ಲೂ ಪ್ರಾದೇಶಿಕ ಭಿನ್ನತೆ ಇದೆ. ಧಾರವಾಡ, ಹುಬ್ಬಳ್ಳಿ, ಗೋವಾ, ದಕ್ಷಿಣ ಕನ್ನಡ, ಕಾಸರಗೋಡು ಪರಿಸರದಲ್ಲಿ ಇರುವ ಕರ್ಹಾಡರ ಭಾಷೆಯಲ್ಲಿ ಆಂತರಿಕ ಭಿನ್ನತೆ ಇದೆ. ಈ ಪ್ರಾದೇಶಿಕ ಭಿನ್ನತೆಯಿಂದ ಕಾಸರಗೋಡಿನ ಕರ್ಹಾಡರಿಗೆ ಉಳಿದ ಪ್ರದೇಶದ ಕರ್ಹಾಡ ಭಾಷೆಯ ಸಾಹಿತ್ಯವನ್ನು ಅರ್ಥೈಸಲು ಕಷ್ಟವಾಗುತ್ತದೆ. ಹಾಗಾಗಿ ಕಾಸರಗೋಡಿನ ಕರ್ಹಾಡ ಸಾಹಿತ್ಯವನ್ನಷ್ಟೇ ಅಧ್ಯಯನಕ್ಕೆ ಒಳಪಡಿಸಿದ್ದೇನೆ. ಈ ಸಂಪ್ರಬಂಧದ ಕೊನೆಗೆ ಕಾಸರಗೋಡಿನ ಕರ್ಹಾಡರು ಬಹುಸಂಖ್ಯೆಯಲ್ಲಿರುವ ಪ್ರದೇಶದ ಪ್ರಾದೇಶಿಕ ನಕ್ಷೆಯನ್ನು ನೀಡಿದ್ದೇನೆ.

ಟಿಪ್ಪಣಿ:

೧. ಗಾಂಧ್ರ ಎನ್ನುವ ಪದವು ಕನ್ನಡ ಭಾಷೆಯಲ್ಲಿರುವ ಶೋಭಾನೆ ಹಾಡುಗಳಿಗೆ ಸಂವಾದಿಯಾಗಿ ಕರ್ಹಾಡ ಭಾಷೆಯ ಪದವಾಗಿದೆ.

★ ★ ★

# ಅಧ್ಯಾಯ - ೨

ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

೨.೦ ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

೨.೧ ಕರ್ನಾಡ ಸಾಹಿತ್ಯದ ಕುರಿತು ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ

ಅಧ್ಯಾಯ - ೨

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಭಾಷೆಯ ಪ್ರಸರಣದ ಆಧಾರದಲ್ಲಿ ದಕ್ಷಿಣ ಕನ್ನಡ ಮತ್ತು ಕಾಸರಗೋಡಿನ ಉತ್ತರ ಭಾಗ, ಕರ್ನಾಟಕ, ಕೇರಳದ ಗಡಿ ಪ್ರದೇಶದಲ್ಲಿ ವಾಸಿಸುವ ಕರ್ಹಾಡ ರನ್ನು ಕಾಸರಗೋಡಿನ ಕರ್ಹಾಡರೆಂದು ಗುರುತಿಸಿ ಆ ಪ್ರದೇಶದ ಕರ್ಹಾಡ ಸಾಹಿತ್ಯವನ್ನು ಅಧ್ಯಯನಕ್ಕೆ ತೆಗೆದು ಕೊಂಡಿದ್ದೇನೆ.

ಕರ್ಹಾಡ ಭಾಷೆಯಲ್ಲಿ ಸಾಹಿತ್ಯ ಸೃಷ್ಟಿ ಕಡಿಮೆ ಸಿಗುವ ಆಕರಗಳೂ ಕಡಿಮೆ. ಇರುವಂತಹ ಸಾಹಿತ್ಯವೂ ಆಧುನಿಕತೆಯ ಪ್ರವಾಹಕ್ಕೆ ಸಿಕ್ಕಿ ಅವನತಿಯ ಅಂಚಿನಲ್ಲಿದೆ. ಕರ್ಹಾಡ ಭಾಷೆಯ ಸಾಹಿತ್ಯದ ಕುರಿತು ಸಮಗ್ರ ಮಾಹಿತಿಯನ್ನು ನೀಡುವ ಉದ್ದೇಶದಿಂದ ವೈಜ್ಞಾನಿಕವಾಗಿ ಈವರೆಗೆ ಯಾವುದೇ ಅಧ್ಯಯನ ನಡೆದಿಲ್ಲ. ಸಿಗುವ ಆಕರಗಳ ಅಭಾವವಿದ್ದರೂ ಅಧ್ಯಯನದ ಅಗತ್ಯತೆಯನ್ನು ಮನಗಂಡು ಈ ಅಧ್ಯಯನವನ್ನು ಕೈಗೊಳ್ಳಲಾಗಿದೆ. ಕರ್ಹಾಡರು ಇತರ ಭಾಷೆಗಳಲ್ಲಿ ಸಾಹಿತ್ಯವನ್ನು ರಚನೆ ಮಾಡಿದ್ದಾರೆ. ಅವರಲ್ಲಿ ಪ್ರಮುಖರನ್ನು ಹಿಂದಿನ ಅಧ್ಯಾಯದಲ್ಲಿ ಉಲ್ಲೇಖಿಸಿದ್ದೇನೆ. ಅವರ ಕೊಡುಗೆ ವಿಶಿಷ್ಟವಾದುದು.

ಕರ್ಹಾಡ ಭಾಷೆಯ ಉಳಿವಿನ ಪ್ರಶ್ನೆ ಇಂದು ಕರ್ಹಾಡ ಜನಾಂಗದ ಮುಂದಿದೆ. ಭಾಷೆಯನ್ನು ಉಳಿಸುವ ಮೊದಲು ಜನಾಂಗವನ್ನು ಉಳಿಸಬೇಕಾಗಿದೆ. ಈ ಹಿನ್ನೆಲೆಯಲ್ಲಿ ಕರ್ಹಾಡ ಭಾಷೆಯ ಸಾಹಿತ್ಯವು ಬೆಳೆದು ಬಂದ ಬಗೆ ಹಾಗೂ ಅದರ ವಿಶಿಷ್ಟತೆಯನ್ನು ಗುರುತಿಸಿ ಅಧ್ಯಯನ ಮಾಡುವ ಅಗತ್ಯವಿದೆ. ಕರ್ಹಾಡ ಭಾಷೆ ಶತಮಾನಗಳಷ್ಟು ಹಳೆಯದು. ಈ ಭಾಷೆಯಲ್ಲಿ ಬೆಳೆದು ಬಂದ ಸಾಹಿತ್ಯಗಳಾವುವು? ವಸ್ತು, ಭಾಷೆ, ಶೈಲಿ, ಛಂದಸ್ಸು, ಕಾವ್ಯಾಂಶ ಮೊದಲಾದವುಗಳಲ್ಲಿ ಸಾಧಿಸಿರುವ ಅನನ್ಯತೆಯನ್ನು ಗುರುತಿಸುವುದು. ಸಾಹಿತ್ಯದ ವಿವಿಧ ಪ್ರಕಾರಗಳನ್ನು ತಿಳಿದು ಕೊಳ್ಳುವುದು ಪ್ರಸ್ತುತ ಈ ಪ್ರಬಂಧದ ಉದ್ದೇಶವಾಗಿದೆ.

ಕರ್ಹಾಡ ಸಮಾಜ ಯಾ ಸಮುದಾಯವನ್ನು ಗಮನಿಸಿದಾಗ ಕರ್ಹಾಡ ಜನಾಂಗದ ಆಚಾರ ವಿಚಾರಗಳು, ರೀತಿ ನೀತಿಗಳು ಹಾಗೂ ಕರ್ಹಾಡ ಭಾಷೆ, ಸಾಹಿತ್ಯ, ಸಮಾಜ ಸಂಸ್ಕೃತಿಯ ಕುರಿತು ಸಮಗ್ರ ಅಧ್ಯಯನ ಆಗಬೇಕಾಗಿದೆ. ಕರ್ನಾಟಕದ ಅಲ್ಲಲ್ಲಿರುವ ಕರ್ಹಾಡ ಜನಾಂಗವನ್ನು ಸಂಘಟಿಸುವಲ್ಲಿ, ಕರ್ಹಾಡರ ಅನನ್ಯತೆಯನ್ನು ಗುರುತಿಸುವಲ್ಲಿ ಕರ್ಹಾಡ ಸಾಹಿತ್ಯದ ಪಾತ್ರವೂ ಮುಖ್ಯವಾಗಿದೆ.

ಕರ್ಹಾಡ ಭಾಷಾ ಸಾಹಿತ್ಯದಲ್ಲಿ ಗದ್ಯಪದ್ಯ ಮಿಶ್ರಿತವಾದ ಹರಿಕಥಾ ರೂಪದಲ್ಲಿರುವ 'ಪ್ರಹ್ಲಾದ ಚರಿತ್ರ' ಎಂಬ ಚಂಪೂ ಕಾವ್ಯವಿದೆ. 'ಗಾಂಧ್ರ' ಸಾಹಿತ್ಯವೆನ್ನುವ ಶೋಭಾನೆ ಹಾಡುಗಳಿವೆ. ಇದು ಒಂದು ಸಾಹಿತ್ಯ ಪ್ರಕಾರವಾಗಿದೆ. 'ಕವಿಕೆಲ್ಲಂಗಾಂಧ್ರ' ಎನ್ನುವ ಶ್ರೀ ಕೃಷ್ಣನ ಬಾಲಲೀಲೆಯನ್ನು ವರ್ಣಿಸುವ ಒಂಡು ಹಾಡು ಇದೆ. ಯಕ್ಷಗಾನ ಪ್ರಸಂಗವೊಂದರಲ್ಲಿ ಕರ್ಹಾಡ ಭಾಷೆಯಲ್ಲಿ ಬರೆದ ಷಟ್ಪದಿಗಳಿವೆ. ನಾಟಕಗಳು, ಕವನ ಸಂಕಲನಗಳು, ಚುಟುಕುಗಳು, ಕಥೆಗಳು ಇವುಗಳು ಆಧುನಿಕ ಬರವಣಿಗೆಗಳಾಗಿವೆ.

ಜಾನಪದ ಸಾಹಿತ್ಯವಾದ ಗಾದೆಗಳು, ಒಗಟುಗಳು, ಕಥೆಗಳು, ಶಿಶು ಗೀತೆಗಳು, ಜೋಗುಳ ಹಾಡುಗಳು ಅಲಿಖಿತ ಸಾಹಿತ್ಯವಾಗಿದ್ದು ಕರ್ಹಾಡ ಸಾಹಿತ್ಯದಲ್ಲಿ ಒಳಗೊಂಡಿದೆ. ಲಿಖಿತ ಮತ್ತು ಅಲಿಖಿತ ಕರ್ಹಾಡ ಸಾಹಿತ್ಯವನ್ನು ಅವಲೋಕಿಸಿದಾಗ ಅನ್ಯ ಭಾಷಾ ಪ್ರಭಾವಕ್ಕೊಳಗಾಗಿ ಸಾಹಿತ್ಯವು ಬದಲಾದುದನ್ನು ಅಧ್ಯಯನ ಮಾಡುವುದು ಜೊತೆಗೆ ಕಾವ್ಯಾಂಶವನ್ನು ಕಂಡುಕೊಳ್ಳುವ ಅವಶ್ಯಕತೆಯೂ ಪ್ರಸ್ತುತ ಅಧ್ಯಯನವು ಒಳಗೊಂಡಿದೆ.

ಈ ಪ್ರಬಂಧದಲ್ಲಿ ಒಟ್ಟು ಏಳು ಅಧ್ಯಾಯಗಳನ್ನು ಮಾಡಲಾಗಿದೆ. ಮೊದಲ ಅಧ್ಯಾಯದಲ್ಲಿ ಅಧ್ಯಯನದ ತಾತ್ವಿಕತೆಯನ್ನು ಹೇಳಿದರೆ ಎರಡನೆಯ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಇದುವರೆಗೆ ಈ ಕ್ಷೇತ್ರದಲ್ಲಿ ನಡೆದ ಅಧ್ಯಯನದ ಇತಿಮಿತಿಗಳ ವಿವರಣೆ ಇದೆ. ಮೂರನೆಯ ಅಧ್ಯಾಯದಲ್ಲಿ ಕನ್ನಡ ಮತ್ತು ಕರ್ಹಾಡ ಭಾಷಿಕ ನೆಲೆಯನ್ನು ಗುರುತಿಸುವ ಪ್ರಯತ್ನವಿದೆ. ಪಾರಂಪರಿಕ ಹಿನ್ನೆಲೆ ಮತ್ತು ಅನುಸಂಧಾನದ ವಿಚಾರವನ್ನು ಇಲ್ಲಿ ತಿಳಿಸಲಾಗಿದೆ. ಮೌಖಿಕ ಪರಂಪರೆಯಲ್ಲಿ ಕರ್ಹಾಡ ಭಾಷಾ ಸಾಹಿತ್ಯ ಮತ್ತು ಲಿಖಿತ ಪರಂಪರೆಯಲ್ಲಿ ಕರ್ಹಾಡ ಭಾಷಾ ಸಾಹಿತ್ಯವನ್ನು ಕ್ರಮವಾಗಿ ನಾಲ್ಕು ಮತ್ತು ಐದನೇಯ ಅಧ್ಯಾಯದಲ್ಲಿ ವಿಶ್ಲೇಷಿಸಲಾಗಿದೆ. ಕರ್ಹಾಡರ ಜೀವನಾವರ್ತನಾಚರಣೆಗಳು ಮತ್ತು ಕರ್ಹಾಡ ಭಾಷಾ ಸಾಹಿತ್ಯದ ಅನನ್ಯತೆಯನ್ನು ಆಠನೆಯ ಅಧ್ಯಾಯದಲ್ಲಿ ವಿವರಿಸಲಾಗಿದೆ. ಏಳನೆಯ ಅಧ್ಯಾಯದಲ್ಲಿ ಅಧ್ಯಯನದ ಫಲಿತವನ್ನು ಕಂಡು ಕೊಳ್ಳುವ ಪ್ರಯತ್ನವಿದೆ. ಪ್ರಬಂಧದ ಕೊನೆಯಲ್ಲಿ ಅಧ್ಯಯನದಕ್ಕೆ ಅನುಕೂಲವಾಗುವಂತೆ ಪೂರಕ ಮಾಹಿತಿಯನ್ನು ನೀಡಲಾಗಿದೆ.

ಹೀಗೆ ಕಾಸರಗೋಡಿನ ಕರ್ಹಾಡ ಸಾಹಿತ್ಯವನ್ನು ಅಧ್ಯಯನ ಮಾಡಿ ವಿವರಣೆ ವಿಶ್ಲೇಷಣೆಗಳ ಮೂಲಕ ವಿಮರ್ಶೆಗೆ ಒಳಪಡಿಸಲಾಗಿದೆ. ಕರ್ಹಾಡ ಭಾಷೆಯಲ್ಲಿರುವ, ಬಾಯ್ದೆರೆಯಾಗಿ ಬಂದಿರುವ ಲಬ್ಧ ಸಾಹಿತ್ಯವು ವಾರ್ಷಿಕಾಂಕಗಳಲ್ಲಿ ಸ್ಮರಣ ಸಂಚಿಕೆಗಳಲ್ಲಿ ಗ್ರಾಂಥಸ್ಥವಾಗಿ ಮುದ್ರಿತವಾಗಿದೆ. ಇವುಗಳ ಜೊತೆಯಲ್ಲಿ ಕರ್ಹಾಡ ಭಾಷಾ ಹೊಸ ಕವಿತೆಗಳು, ನಾಟಕಗಳು, ಚುಟುಕುಗಳು, ಕರ್ಹಾಡ ಪತ್ರಿಕೆಗಳಲ್ಲಿ ಪ್ರಕಟವಾದ ಕಥೆಗಳನ್ನು ಅಧ್ಯಯನಕ್ಕೆ ಬಳಸಲಾಗಿದೆ. ಹಿರಿಯರಿಂದ ಕೇಳಿ ಸಂಗ್ರಹಿಸಿದ ಜಾನಪದ ಸಾಹಿತ್ಯ ಮತ್ತು ಕರ್ಹಾಡ ಬ್ರಾಹ್ಮಣರು ಒಂದು ಅಧ್ಯಯನ ಎನ್ನುವ ಕೃತಿಯನ್ನು ಅಧ್ಯಯನಕ್ಕೆ ತೆಗೆದು ಕೊಂಡಿದ್ದೇನೆ.

ಕಾಸರಗೋಡಿನ ಕರ್ಹಾಡ ಸಾಹಿತ್ಯದ ವೈಶಿಷ್ಟ್ಯಗಳು ಅನ್ಯಭಾಷಾ ಪ್ರಭಾವ, ಗಡಿಯಾಚೆಗಿನ ಸಂದಿಗ್ಧತೆ, ಸಾಂಸ್ಕೃತಿಕ ಹೊಕ್ಕು ಬಳಕೆ ತಂದ ಸಂಸ್ಕೃತಿಯ ವಿವರಣೆ, ಯಕ್ಷಗಾನದ ಪ್ರಭಾವಗಳು ಮೊದಲಾದ ಅಂಶಗಳನ್ನು ವಿಶ್ಲೇಷಿಸುವ ಪ್ರಯತ್ನವನ್ನು ಮಾಡಿದ್ದೇನೆ. ಹೀಗೆ ವಿವರಣೆ ವಿಶ್ಲೇಷಣೆಯ ಮೂಲಕ ವಿವಿಧ ಸಾಹಿತ್ಯ ಪ್ರಕಾರಗಳನ್ನು ಗುರುತಿಸಿ ವಿಮರ್ಶೆಯ ಮೂಲಕ ಕರ್ಹಾಡ ಸಾಹಿತ್ಯದ ವಿಶಿಷ್ಟತೆ, ಅನನ್ಯತೆಯನ್ನು ಗುರುತಿಸುವ ಪ್ರಯತ್ನ ಇದಾಗಿದೆ.

ಕರ್ಹಾಡ ಸಾಹಿತ್ಯದ ಅಧ್ಯಯನಕ್ಕೆ ಲಭ್ಯವಾಗುವಂತಹ ಸಾಮಗ್ರಿ ಕಡಿಮೆ. ಈ ವಿಷಯದ ಅಧ್ಯಯನಕ್ಕೆ ಸಾಹಿತ್ಯದ ದಾಖಲೆಗಳು ಹೆಚ್ಚಿಲ್ಲದಿರುವುದರಿಂದ ಕ್ಷೇತ್ರ ಕಾರ್ಯವನ್ನು ಮಾಡಿದ್ದೇನೆ.

### ೨.೧ ಕರ್ಹಾಡ ಸಾಹಿತ್ಯದ ಕುರಿತು ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ:

ಕರ್ಹಾಡ ಸಾಹಿತ್ಯದ ಬಗೆಗೆ ವಿವರ ನೀಡುವ ಲೇಖನಗಳು ಬಂದಿವೆ. ಕಾಸರಗೋಡಿನ ಕರ್ಹಾಡ ಸಾಹಿತ್ಯಕ್ಕೆ ಸಂಬಂಧಿಸಿ ವಾರ್ಷಿಕಾಂಕಗಳಲ್ಲಿ ಸ್ಮರಣ ಸಂಚಿಕೆಗಳಲ್ಲಿ ಕೆಲವೊಂದು ಲೇಖನಗಳನ್ನು ಹೊರತುಪಡಿಸಿದರೆ ಉಳಿದಂತೆ ಸಮಗ್ರವಾಗಿ ಈ ವಿಷಯದಲ್ಲಿ ಅಧ್ಯಯನ ನಡೆದಿಲ್ಲ. ಇದಕ್ಕೆ ಹಲವಾರು ಕಾರಣಗಳು ಇದ್ದಿರಬಹುದು.

ಕರ್ಹಾಡ ಭಾಷೆ ವಿಶಿಷ್ಟವಾದುದು ಅದರ ಉಚ್ಚಾರ ವೈಖರಿ ಅನ್ಯಭಾಷಿಕರಿಗೆ ಥಕ್ಕನೆ ಬರಲಾರದು. ಕರಾಡಿ ಭಾಷೆಗೂ ಮರಾಠಿ ಭಾಷೆಗೂ ವ್ಯತ್ಯಾಸವಿದೆ. ಮಾತೃ ಭಾಷೆಗಿಂತ ಪವಿತ್ರವಾದುದು ಇನ್ನೊಂದಿಲ್ಲ.

ಆದರೆ ಕರ್ಹಾಡರು ಆ ಭಾಷೆ ಮಾತನಾಡಿದರೇ ಅಪಮಾನವೆಂದೆನಿಸುತ್ತಾರೆ. ಮಾತನಾಡಿದರೆ ತಾವೆಲ್ಲಿ ಅಪಹಾಸ್ಯಕ್ಕೆ ಗುರಿಯಾಗುವೆವೋ ಎಂಬ ಭಾವನೆ ಇದೆ. ಕೆಲವರಿಗಂತೂ ಮಾತನಾಡಲು ಬರುವುದಿಲ್ಲ. ಅನ್ಯಭಾಷಾ ಮೋಹ ಹೆಚ್ಚಾಗಿದೆ.

ಜನರನ್ನು ಒಂದು ಗೂಡಿಸುವ ಶಕ್ತಿ ಮಾತೃಭಾಷೆಗೆ ಇದೆ. ಅದು ಆತ್ಮೀಯತೆಯನ್ನು ಬೆಳೆಸುತ್ತದೆ. ರೈಲು, ಬಸ್ಸುಗಳಲ್ಲಿ ಹೋಗುವಾಗ, ಸಭೆ– ಸಮಾರಂಭಗಳು ನಡೆಯುವಾಗ, ಮಠ–ದೇವಾಲಯಗಳಲ್ಲಿ ಭೇಟಿಯಾದಾಗ, ಸ್ವಜಾತಿಯ ಬಾಂಧವರನ್ನು ಕಂಡೊಡನೆಯೆ ಅವರ ಮಾತೃಭಾಷೆಯಲ್ಲೇ ಮಾತನಾಡುವ ಬೇರೆ ಬೇರೆ ಜನಾಂಗದವರನ್ನು ನಾವು ದಿನನಿತ್ಯ ಕಾಣುತ್ತೇವೆ. ಆದರೆ ಕರ್ಹಾಡರು ಮಾತೃಭಾಷೆಯನ್ನು ಮಾತನಾಡಲು ಹಿಂಜರಿಯುತ್ತಾರೆ. ಹಳೆಯ ತಲೆಮಾರಿನವರು ಕರ್ಹಾಡ ಭಾಷೆಯಲ್ಲಿ ಮಾತನಾಡಿದರೆ ಹೊಸ ತಲೆಮಾರಿನವರು ಪ್ರಾದೇಶಿಕ ಭಾಷೆಯಲ್ಲಿ ಉತ್ತರಿಸುವುದನ್ನು ಕಾಣಬಹುದಾಗಿದೆ. ಇಂಥ ಸ್ಥಿತಿಯು ಭಾಷೆಗಿರುವಾಗ ಅಧ್ಯಯನ ಹೇಗೆ ಸಾಧ್ಯ. ಭಾಷೆ ಬೆಳೆಯಬೇಕು. ಗ್ರಂಥಸ್ಥವಾಗಿ ಉಳಿಯಬೇಕು. ವ್ಯವಹಾರದ ಜೊತೆಗೆ ಸಾಹಿತ್ಯ ರಚನೆಯೂ ಆಗಬೇಕು. ಭಾಷೆ ಸಂಸ್ಕೃತಿಯ ವಾಹಕವಾಗಿದೆ.

'ಕಾಸರಗೋಡಿನ ಕರ್ಹಾಡ ಉಪಭಾಷೆ' ಎನ್ನುವ ವಿಷಯದಲ್ಲಿ ಎಂ.ಫಿಲ್ ಪದವಿಗಾಗಿ ಡಾ। ರಾಧಾಕೃಷ್ಣ ಬೆಳ್ಳೂರರು ಅಧ್ಯಯನ ಮಾಡಿದ್ದಾರೆ. ಈ ಕೃತಿ ೨೦೦೧ ರಲ್ಲಿ ಪ್ರಕಟವಾಗಿದೆ. ಈ ಕೃತಿಯಲ್ಲಿ ಬೆಳ್ಳೂರರು ಕರ್ಹಾಡ ಭಾಷೆಯ ವ್ಯಾಕರಣ ಮತ್ತು ಶಬ್ದ ರಚನೆಯ ವಿವರಗಳನ್ನು ಭಾಷಾ ವೈಜ್ಞಾನಿಕ ದೃಷ್ಟಿಯಿಂದ ಗುರುತಿಸುವ ಪ್ರಯತ್ನಮಾಡಿದ್ದಾರೆ. 'ಕರ್ಹಾಡ ಸಾಂಸ್ಕೃತಿಕ ಅಧ್ಯಯನ' ಎನ್ನುವ ವಿಷಯದಲ್ಲಿ ಅಧ್ಯಯನ ಮಾಡಿ ಎಂ.ಫಿಲ್ ಪದವಿಗೆ ಸಂಪ್ರಬಂಧವನ್ನು ಶ್ರೀಮತಿ ರತ್ನಾವತಿ ತೈರೆಯವರು ಬರೆದಿದ್ದಾರೆ. ಕರ್ಹಾಡ ಸಾಂಸ್ಕೃತಿಕ ಒಳನೋಟವನ್ನು ಬಿಂಬಿಸುವ ಪ್ರಯತ್ನ ಅಲ್ಲಿದೆ ಡಾ। ಡಿ. ಸದಾಶಿವ ಭಟ್ ಅವರು ಬರೆದ 'ಕರ್ಹಾಡ ಬ್ರಾಹ್ಮಣರು - ಒಂದು ಅಧ್ಯಯನ' ಎನ್ನುವ ಗ್ರಂಥದಲ್ಲಿ ಕರ್ಹಾಡ ಭಾಷೆ, ಸಮಾಜ, ಸಂಸ್ಕೃತಿ, ಸಾಹಿತ್ಯ, ಆಚಾರ ವಿಚಾರಗಳು, ರೀತಿ ನೀತಿ ಇವೆಲ್ಲದರ ಮಾಹಿತಿ ಇದೆ. ಇವರು ಹೇಳಿದ ಕರ್ಹಾಡ ಸಮಾಜದ ರೀತಿ ನೀತಿಗಳು ಒಂದರ್ಥದಲ್ಲಿ ಎಲ್ಲ ಬ್ರಾಹ್ಮಣ ಸಮಾಜಕ್ಕೂ ಅನ್ವಯವಾಗುವಂತಹದಾಗಿದೆ. ಕಾಸರಗೋಡಿನ ಕರ್ಹಾಡ ಸಾಹಿತ್ಯದ ಕುರಿತಂತೆ ವಿಶ್ಲೇಷಣಾತ್ಮಕ ಅಧ್ಯಯನ ಇದುವರೆಗೆ ನಡೆದಿಲ್ಲ ಈ ಹಿನ್ನಲೆಯಲ್ಲಿ ಕಾಸರಗೋಡಿನ ಕರ್ಹಾಡ ಸಾಹಿತ್ಯವನ್ನು ಮೊದಲ ಬಾರಿಗೆ ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಜಪಾನಿನ ಶ್ರೀ ನಚೋಮಿ ಕೋದಾಮ ಎಂಬವರು ಕರ್ಹಾಡ ಭಾಷೆಯ ಕುರಿತು ಕಳೆದ ಹತ್ತೊಂಬತ್ತು ವರ್ಷಗಳಿಂದ ಅಧ್ಯಯನ ನಿರತರಾಗಿರುವವರು. ಇವರು ಪಂಚದ್ರಾವಿಡ ಭಾಷಾ ಗುಂಪಿಗೆ ಸೇರದ ಕರ್ಹಾಡ ಭಾಷೆ ಸ್ವತಂತ್ರ ಅಸ್ತಿತ್ವವುಳ್ಳ ಪ್ರತ್ಯೇಕ ಭಾಷೆಯೆಂದಿದ್ದಾರೆ. ಕರ್ಹಾಡ ಭಾಷೆಯ ಕುರಿತು ಪ್ರಥಮ ಶಬ್ದಕೋಶ ತಯಾರಿಸಿಕೊಟ್ಟಿದ್ದಾರೆ.

★ ★ ★

# ಅಧ್ಯಾಯ – ೩

## ಕನ್ನಡ ಮತ್ತು ಕರ್‍ಹಾಡ ಭಾಷಿಕ ನೆಲೆ

ಅಧ್ಯಾಯ– ೩

# ಕನ್ನಡ ಮತ್ತು ಕರ್‍ನಾಡ ಭಾಷಿಕ ನೆಲೆ

೩.೧. ಕನ್ನಡ ಮತ್ತು ಕರ್‍ನಾಡ :– ಪ್ರತಿಯೊಬ್ಬರಿಗೂ ತನ್ನದೇ ಆದ ಮಾತೃಭಾಷೆಯಿದೆ. ಹುಟ್ಟಿನಿಂದಲೇ ಅವನಿಗೆ ಅಂಟಿಕೊಂಡು ಬಂದಿರುತ್ತದೆ. ಮನುಷ್ಯನಿಗೆ ಜನನಿ, ಜನ್ಮಭೂಮಿ, ಮಾತೃಭಾಷೆಗಳಿಗಿಂತ ಮಿಗಿಲಾದವು ಬೇರೆ ಇಲ್ಲ. ತಾಯ್ನುಡಿಯನ್ನು ಉಳಿಸಿ ಬೆಳೆಸಬೇಕಾದುದು ಅವನ ಧರ್ಮ. ತಾಯಿಯ ಹಾಲಿನಂತೆ ಅದು ಅಪ್ಯಾಯಮಾನ, ಪೌಷ್ಟಿಕ, ಜೀವಧಾರಕ, ಕಲೆ, ಸಂಸ್ಕೃತಿ, ನಾಗರೀಕತೆ ಇವುಗಳ ವಾಹಕ ಅಭಿವ್ಯಕ್ತಿ ಮಾಧ್ಯಮವಾದ ಭಾಷೆ ಬೆಳೆದಂತೆ ಜನಾಂಗವೂ ಬೆಳೆಯುತ್ತದೆ. ಕನ್ನಡದಲ್ಲಿರುವ "ನಿನಗೆ ಹೇಳಿದರೆ ಭಾಷೆ ಇಲ್ಲವೋ" ಎನ್ನುವ ಮಾತು ಕರ್‍ನಾಡದಲ್ಲಿ "ತುಕ್ಕ ಸಂಗಿಲ್ಲೇರಿ ಭಾಸನಾಕಿ?" ಎಂದು ಇಂದಿಗೂ ರೂಢಿಯಲ್ಲಿದೆ. "ಭಾಷೆ ಇಲ್ಲ" ಎಂದರೆ ಎಷ್ಟು ಹೇಳಿದರೂ ನಿನಗೆ ಗೊತ್ತಾಗುವುದಿಲ್ಲ, ತಿಳಿಯುವುದಿಲ್ಲ ಎಂದೇ ಇದರರ್ಥ. ಭಾಷೆ ಎಂದರೆ ತಿಳಿ, ಗೊತ್ತಾಗು ಎನ್ನುವುದರ ಪರ್ಯಾಯ ಪದ. ತನ್ನ ಮನಸ್ಸಿನಲ್ಲಿರುವುದನ್ನು ಇನ್ನೊಬ್ಬರಿಗೆ ತಿಳಿಸುವುದಕ್ಕೂ ಇನ್ನೊಬ್ಬರ ಮನಸ್ಸಿನಲ್ಲಿರುವುದನ್ನು ತಿಳಿಯಲಿಕ್ಕೂ ಸಾಧನವಾದುದೇ ಭಾಷೆ. ಭಾಷೆ ಆತ್ಮೀಯತೆಯನ್ನು ಬೆಳೆಸುತ್ತದೆ. ಇಂತಹ ಭಾಷೆಗಳಲ್ಲಿ ಕೆಲವು ಸುಸಂಸ್ಕೃತ, ಕ್ಷುಲ್ಲಕ, ನಾಗರೀಕ, ಅನಾಗರೀಕ, ಗ್ರಾಂಥಿಕ, ನಿಗ್ರಾಂಥಿಕವಾಗಿವೆ. ವ್ಯಾಕರಣ ಸಾಹಿತ್ಯಾಲಂಕಾರಗಳಿಂದ ಪರಿಪೂರ್ಣವಾಗಿ ಲಿಪಿಬದ್ಧ ಸಾಂಸ್ಕೃತಿಕ ಭಾಷೆ ಸುಸಂಸ್ಕೃತವೆನಿಸುತ್ತದೆ. ತದ್ವಿರುದ್ಧವಾದುದು ಕ್ಷುಲ್ಲಕವೋ, ಅನಾಗರೀಕವೋ, ನಿಗ್ರಾಂಥಿಕವೋ ಎನಿಸುತ್ತದೆ. ಈ ದೃಷ್ಟಿಯಿಂದ ನೋಡಿದರೆ ಕರ್‍ನಾಡ ಭಾಷೆಯನ್ನು "ಕ್ಷುಲ್ಲಕ" ಭಾಷಾ ವರ್ಗಕ್ಕೆ ಸೇರಿಸಬಹುದು. "ಕ್ಷುಲ್ಲಕ" ಎಂದೊಡನೆ ನಿಕೃಷ್ಟ, ಕೀಳು ಎಂದೆಣಿಸಬೇಕಾಗಿಲ್ಲ. ಲಿಪಿಯಾಗಲೀ, ಸಾಹಿತ್ಯವಾಗಲೀ ಇಲ್ಲದ ವ್ಯಾವಹಾರಿಕ ಭಾಷೆ ಎನ್ನಬಹುದು. ಹಾಗಾಗಿಯೇ ವ್ಯಾವಹಾರಿಕ ಯಾ ಶ್ರಾವಣ, ಗ್ರಾಂಥಿಕಾ ಯಾ ಚಾಕ್ಷುಷ ಎಂಬ ಎರಡು ಭೇದಗಳು ಹುಟ್ಟಿಕೊಂಡಿವೆ.

"ಜನ ಅಥವಾ ಪ್ರದೇಶದಿಂದಲೇ ಭಾಷೆಗೆ ಹೆಸರು ಪ್ರಾಪ್ತವಾಗುವುದು. ಇದು ಸಾಮಾನ್ಯ ನಿಯಮ" ಎಂದ ಶಂಬಾ ಜೋಷಿಯವರು –"ಕಂನಡ" ಇದು ಪ್ರದೇಶವಾಚಕ ಪದ ಎಂಬುವುದನ್ನು ಎಲ್ಲರೂ ಒಪ್ಪಿದ್ದಾಗಿದೆ. ಭಾಷೆಗೂ "ಕಂನಡ" ಎಂದೇ ಹೇಳುವಲ್ಲಿ ವೈಚಾರಿಕಾ ಸಂದಿಗ್ಧತೆಗೆ ಇಂಬು ದೊರೆಯುತ್ತದೆ. ಆದುದರಿಂದ 'ಕಂನಾಡ ನುಡಿ' ಎನ್ನವುದು,ಹೆಚ್ಚು ಲೇಸು. ಮರಹಟ್ಟಿ ನಾಡಿನ ನುಡಿ ಮರ್‍ಹಾಟಿ. ಮರ್‍ಹಾಟಿಗರು (ಕಂನಾಡಿ) ಕಾನಡಿ ಎಂಬುದು ಒಂದು ರೀತಿಯಲ್ಲಿ ಸರಿಯಾಗಿದೆ. ತರ್ಕ ಶುದ್ಧವಾಗಿದೆ. ಷಷ್ಠ್ಯಂತ ಪದವನ್ನು ಬಳಸಿ 'ಕಂನಡದ ನುಡಿ' ಎಂದರೂ ತಪ್ಪಲ್ಲ. ಕಂನಾಡಿನ ಭಾಷೆ ಎಂದಂತಾಗುವುದು. ಹಾಗಲ್ಲದಿದ್ದರೆ ಭಾಷೆಗೆ 'ಕನ್ನಡ' ಎಂಬಲ್ಲಿ ಅನೌಚಿತ್ಯ ದೋಷಕ್ಕೆ ಇಂಬು ದೊರೆಯುವುದು. 'ಕಂನಡ' ಎಂಬ ಪ್ರಯೋಗದಲ್ಲಿ ಅರ್ಥ ನಿಶ್ಚಿತ ಇಲ್ಲದೆ ವೈಚಾರಿಕಾ ಅಸ್ಪಷ್ಟತೆಗೆ ಇಂಬು ದೊರೆಯುವುದು. ಈ ಕಾರಣದಿಂದ ಈ ಬರವಣಿಗೆಯಲ್ಲಿ ಕಂ– ನಾಡ –ನುಡಿ ಅಥವಾ (ಸಂಕ್ಷಿಪ್ತವಾಗಿ) 'ಕಂ–ನುಡಿ' ಎಂಬ ಪದವನ್ನು ಬಳಸಲಾಗಿದ್ದ್ ಎಂದ ಮಾತು ಮನನೀಯ.

9ನೆಯ ಶತಮಾನದ ಕವಿರಾಜಮಾರ್ಗಕಾರನು ದೇಶ ಮತ್ತು ಭಾಷೆ ಈ ಎರಡೂ ಅರ್ಥಗಳಲ್ಲಿ ಕಂನಡ ಎಂಬ ಪದವನ್ನು ಬಳಸಿದ್ದಾಗಿದೆ. "ಕಾವೇರಿಯಿಂದ ಗೋದಾವರಿವರಂ ಇರ್ದನಾಡದು ಕಂನಡ"

ಎಂಬಲ್ಲಿ ದೇಶವಾಚಕ ಪ್ರಯೋಗವನ್ನು ಕಾಣಬಹುದು. 'ಪಳಗನ್ನಡಮಂ ಪೊಲಗೆಡಿಸಿ ನುಡಿವರ್' 'ಕನ್ನಡಂಗಳೊಳ್ ದೋಸಂ ಇನಿತೆಂದು ವಾಸುಗಿಯುಂ ಅರಿಯಲಾರ" ಈ ಎರಡರಲ್ಲೂ ಮಾರ್ಗಕಾರ ಕಂನಡವನ್ನು ಭಾಷಾಸೂಚಕವಾಗಿಸಿದ್ದಾನೆ. ಆಂಡಯ್ಯನು ಕಂನಡಮೆ ..... ನಾಡದು' ಎನ್ನುವಲ್ಲಿ 'ಕಂನಡ ; ಎಂಬುದನ್ನು ಒಂದು ಭಾಷೆ ಎಂಬ ಅರ್ಥದಲ್ಲಿ ಪ್ರಯೋಗಿಸಿದ್ದಾನೆ.

Mr.ರೀವ್ ಎನ್ನುವವರು 1858 ರಲ್ಲಿ ಬರೆದ " ಕನ್ನಡ ಮತ್ತು ಇಂಗ್ಲೀಷ್" ಎನ್ನುವ ನಿಘಂಟಿನಲ್ಲಿ.-"ಕರ್‍ಹಾಡ" Karada (ಕರಾಳ) ಎಂದು ಹೇಳಿದ್ದಾರೆ. 'ಕರಹಟ' ಎಂಬುದು 'ಕರ್‍ಹಾಡ' ಶಬ್ದದ ಮೂಲರೂಪ. ಇದು ದೇಶ ವಾಚಿ. ಕ್ರಿ. ಶ ಹತ್ತನೆಯ ಶತಮಾನಕ್ಕಿಂತ ಹಿಂದೆ ಈಗಿನ ಮಹಾರಾಷ್ಟ್ರದ ದಕ್ಷಿಣ ಪಶ್ಚಿಮದಲ್ಲಿ ವ್ಯಾಪಿಸಿದ್ದ ಕರಹಾಟಕ ಅತ್ಯಂತ ಪ್ರಸಿದ್ಧ ಪ್ರಾಂತವಾಗಿತ್ತು. ಚಾಲುಕ್ಯ ಅರಸ ವಿಜಯಾದಿತ್ಯನ ಕ್ರಿಸ್ತ ಶಕ 703 ರ ತಾಮ್ರ ಪಟದಲ್ಲಿ 'ಕರಹಡ ವಿನಿರ್ಗತ ಭಾರದ್ವಾಜ ಅಗ್ನಿವೇಶ್ಯಾನಾಮ್' ಮುಂತಾದ ಮಾತುಗಳಿವೆ.

ಜನ್ನ ತನ್ನ ಕಾವ್ಯ 'ಯಶೋಧರ ಚರಿತೆ' ಯಲ್ಲಿ 'ಕರಹಟ' ಎಂಬ ಪ್ರದೇಶವನ್ನು ಉಲ್ಲೇಖಿಸುತ್ತಾನೆ.[೨] ಕ್ರಿ.ಶ 1860 ರಲ್ಲಿ ರಚನೆಗೊಂಡ 'ಕರಹಾಟಕ ಮಹಾತ್ಮಂ' ಎಂಬ ಗ್ರಂಥದಲ್ಲಿ 'ಕೃಷ್ಣಾ- ವೇಣೀ ಹಾಗೂ ಕೊಯನಾ ನದಿಗಳ ಸಂಗಮ ಸ್ಥಳದಲ್ಲಿಕರಹಾಟಕ ಕ್ಷೇತ್ರವಿದೆ' ಎಂದು ಉಲ್ಲೇಖಿಸಲಾಗಿದೆ. ಕ್ರಿಸ್ತ ಶಕ 10ನೇ ಶತಮಾನಕ್ಕಿಂತ ಈಚಿನ ಹಲವಾರು ಶಾಸನ ಹಾಗೂ ಗ್ರಂಥಗಳಲ್ಲಿ ಕರಹಾಟಕ ಅಥವಾ ಕರಹಟಕದ ಪ್ರಸ್ತಾಪ ಬರುತ್ತದೆ. ಈ ಎಲ್ಲ ಆಧಾರಗಳೂ ಕ್ರಿಸ್ತ ಶಕ ಹತ್ತನೇ ಶತಮಾನಕ್ಕಿಂತ ಹಿಂದೆ ಕರಹಾಟಕವೆಂಬ ಪ್ರದೇಶ ಅತ್ಯಂತ ಪ್ರಸಿದ್ಧವಾಗಿತ್ತೆಂದು ಸಾರಿ ಹೇಳುತ್ತವೆ. 12ನೇ ಶತಮಾನದ ನಾಗವರ್ಮ ತನ್ನ ಭಾಷಾ ಭೂಷಣದಲ್ಲಿ ಹೇಳುವ 'ಕರಹಡದೊಳ್ ಪುಟ್ಟಿದಾತಂ ಕರಹಡಿಚಮ್' ಎಂಬ ಮಾತು ದೇಶವಾಚಿಯಾಗಿದ್ದ ಶಬ್ದ 12ನೇ ಶತಮಾನಕ್ಕಾಗಲೇ ಜನಾಂಗವಾಚಿಯಾಗಿತ್ತೆನ್ನುವುದನ್ನು ಸೂಚಿಸುತ್ತದೆ.

೩.೨ ಕರ್‍ಹಾಡ ಪದ ನಿಷ್ಪತ್ತಿ :- 'ಕಂನಾಡ'ದಲ್ಲಿರುವವರು ಕನ್ನಡಿಗರು. ಹಾಗೆಯೇ ಕರ್‍ಹಾಡ ದೇಶದಲ್ಲಿರುವವರೆಲ್ಲರೂ ಕರ್‍ಹಾಡರೇ. ಮರಾಠರು, ಕೊಂಕಣರು, ತೌಳವರು ಎಂದಂತೆ. ಕರ್‍ಹಾಡರು ಎನ್ನುವುದಕ್ಕೆ ಕರ್‍ಹಾಡ ಬ್ರಾಹ್ಮಣರು ಎನ್ನುವ ಅರ್ಥ ಬರುವುದೇ ಇಲ್ಲ. ಈ ಅರ್ಥ ಬರಬೇಕಿದ್ದರೆ ಬರೇ ಕರ್‍ಹಾಡರು ಎಂದು ಹೇಳದೆ ಕರ್‍ಹಾಡ ಬ್ರಾಹ್ಮಣರೆಂದೇ ಹೇಳಬೇಕು. Rv.A. Maneer ನ ತುಳು ಇಂಗ್ಲೀಷ್ ನಿಘಂಟಿನಲ್ಲಿ "ಕರಾಡಿ Karadi n.A Section of Maratha Brahmins Supposed to have come from Karhada" ಎಂದು ಹೇಳಿದರೆ ಕಿಟ್ಟೆಲ್ ರವರು - ತಮ್ಮ ನಿಘಂಟಿನಲ್ಲಿ ಕರಾಡಿ (S.N) A class of Brahmans ಎಂದಿದ್ದಾರೆ. ಗುರುನಾಥ ಜೋಶಿಯವರು ತಮ್ಮ ಕನ್ನಡ -ಕನ್ನಡ ಶಬ್ದಕೋಶದಲ್ಲಿ ಕರಾಡಿ (ನಾ) ಕರ್‍ಹಾಡ ದೇಶದ ಕರ್‍ಹಾಡ ಬ್ರಾಹ್ಮಣರು ಎಂದಿದ್ದಾರೆ. ಸಂಸ್ಕೃತದಲ್ಲಿ ರೇಫ ಹಕಾರಗಳು ದ್ವಿತ್ವವಾಗುವುದಿಲ್ಲ. ಹೆಚ್ಚಿನ ಎಲ್ಲಾ ಭಾಷೆಗಳಲ್ಲಿ ಈ ನಿಯಮ ಕಂಡುಬರುತ್ತದೆ. ಕರಾಡಿಯಲ್ಲಿ ರೇಫ ದ್ವಿತ್ವವಾಗುತ್ತದೆ. ಕರ್‍ರ, ಧರ್‍ರ, ಸರ್‍ರ, ಮಾರ್‍ರ, ಇತ್ಯಾದಿ.

'ಕರ್‍ಹಾಡ' ಬದಲು "ಕರ್ಹಾಡವೇ" ಸೂಕ್ತ ಕಾರ್ಯ್ಯ, ಸೂರ್ಯ್ಯ, ತರ್ಕ ಮೊದಲಾದ ಸಂಸ್ಕೃತ ಶಬ್ದಗಳನ್ನು ಕಾರ್‍ಯ, ಸೂರ್‍ಯ, ತರ್‍ಕ ಎಂದು ಬೇರೆ ಬೇರೆ ಭಾಷೆಗಳಲ್ಲಿ ಬರೆಯಲಾಗುತ್ತದೆ. ಸಂಸ್ಕೃತ

ಭಾಷಾ ನಿಯಮದಂತೆ ಇದು ಸರಿಯಲ್ಲ. ಕನ್ನಡದಲ್ಲಿ ಹೀಗಾದರೆ ಕ್ರಮೇಣ ಕನ್ನಡದ ಅರ್ಕಾವೊತ್ತೇ ಮಾಯವಾಗಬಹುದು. "ಕರ್ಹಾಡ" ಎಂದು ಬರೆಯಲು ಮರಾಠೀ ಭಾಷೆಯ ಬರವಣಿಗೆಯ ಪ್ರಭಾವವೇ ಕಾರಣ.

ಕರ್ಹಾಡರ ಮಾತೃಭಾಷೆ ಎಲ್ಲಾ ಕಡೆ ಮರ್ಹಾಟಿ ಯಾ ಮರಾಠಿ. ಮರ್ಹಾಟದಲ್ಲಿರುವವರು ಮರ್ಹಾಟರು ಅವರ ಭಾಷೆ ಮರ್ಹಾಟಿ. ಹಾಗಿದ್ದರೆ ಕರ್ಹಾಟರೂ ಮರ್ಹಾಟದವರೆ ಆಗಿರಬೇಡವೆ? ಆದ್ದರಿಂದ ಮರ್ಹಾಟ, ವರ್ಹಾಟದಂತರ್ಗತವಾಗಿದ್ದ ಕರಹಟ್ಟ– ಕರಹಾಟ –ಕರ್ಹಾಡ ಕರಾಡವಾಗಿ ಮಾರ್ಪಟ್ಟಿತು. ಕರಹಾಟಕ ಅಥವಾ ಕರಹಟಕ ಬರಬರುತ್ತ ಕರಾಡವಾಗಿ

ಕರಹಾಟಕ > ಕರಹಾಟ > ಕರ್ಹಾಟ > ಕರ್ಹಾಡ > ಕರಾಡವಾಯಿತು.
ಕರಹಟಕ ಕರಹಟ

೩.೩. ಕರ್ಹಾಡಿ ಭಾಷೆ : ಕರಾಡ ಬ್ರಾಹ್ಮಣರ ಭಾಷೆ ಯಾವುದೆನ್ನುವ ಬಗ್ಗೆ ಜಿಜ್ಞಾಸೆ ನಡೆಯುತ್ತಾ ಬಂದಿದೆ. "ಮಹಾರಾಷ್ಟ್ರದ ಪ್ರಾಂತ ಭಾಷೆಯಾದ ಮಾರಾಠಿಯ ಒಂದು ರೀತಿಯ ಆಡುನುಡಿಯ ಅಪಭ್ರಂಶವೇ ಕರ್ಹಾಡಿ ಭಾಷೆಯಾಗಿದೆ. ಮಹಾರಾಷ್ಟ್ರದ ಬ್ರಾಹ್ಮಣರಲ್ಲಿರುವ ದೇಶಸ್ಥ, ಚಿತ್ಪಾವನ್ ಮತ್ತು ಕರ್ಹಾಡ ಎಂಬ ಮೂರು ವಿಭಾಗಗಳಲ್ಲಿ ಕರ್ಹಾಡ ವರ್ಗಕ್ಕೆ ಸೇರಿದ ಇವರ ಮನೆಮಾತು ಇಂದಿಗೂ 'ಕರ್ಹಾಡಿ' ಎಂಬ ಭಾಷೆಯೇ ಆಗಿದೆ. ಕರ್ಹಾಡರ ಮನೆಮಾತು ಮೂಲತಃ ಮರಾಠಿ ಭಾಷೆ. ಆದರೆ ತುಳುನಾಡಿನ ಬಹುಕಾಲದ ಸಂಪರ್ಕದಿಂದ ಅದು ಅಪಭ್ರಂಶವಾಗಿದೆ. ಪ್ರಕೃತ ಇಲ್ಲಿನ ಕರ್ಹಾಡರಿಗೆ, ಮೂಲ ಮರಾಠಿ ಭಾಷೆಯಾಗಲಿ, ಲಿಪಿಯಾಗಲಿ, ಸಾಹಿತ್ಯವಾಗಲಿ ಇಲ್ಲವೆನ್ನಬಹುದು". "ಕರ್ಹಾಡ ಬ್ರಾಹ್ಮಣರಲ್ಲಿರುವ ಭಾಷೆ ಕೊಂಕಣಿಯ ಭಾಷೆಯ ಆಳವಾದ ಪ್ರಭೇದವೆಂದೇ ಹೇಳಬಹುದು". "ಕರ್ಹಾಡ ಬ್ರಾಹ್ಮಣರು ಮೂಲತಃ ಮಹಾರಾಷ್ಟ್ರದವರಾಗಿದ್ದರಿಂದ ಅವರ ಮಾತೃಭಾಷೆ ಮರಾಠಿ. ಆದರೆ ಮಹಾರಾಷ್ಟ್ರದ ಹೊರಗೆ ಇರುವ ಈ ಸಮುದಾಯದವರು, ತಾವು ವಾಸಿಸುವ ಪ್ರದೇಶದಲ್ಲಿರುವ ಭಾಷೆಗಳ, ಶಬ್ದಗಳನ್ನೊಳಗೊಂಡ ಮಿಶ್ರ ಮರಾಠಿಯನ್ನು ಮಾತಾಡುವವರು. ಕರ್ನಾಟಕದಲ್ಲಿ ಕೆಲವೆಡೆ ಇವರಲ್ಲಿ ಕನ್ನಡ ಮನೆಮಾತಾಗಿರುತ್ತದೆ. "ಕರ್ಹಾಡರ ಭಾಷೆ ಕರ್ಹಾಡ". ಹೀಗೆ ಬೇರೆ ಬೇರೆ ವಿದ್ವಾಂಸರು ತಮ್ಮ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

ಅಭಿಪ್ರಾಯ ಭೇದಗಳೇನೇ ಇದ್ದರು ಕರ್ಹಾಡದಿಂದ ಬಂದವರ ಮಾತೃ ಭಾಷೆ ಕರ್ಹಾಡಿಯೇ ಆಗಿದೆ. ಅವರ ಭಾಷೆ ಕನ್ನಡವಾಗಲೀ, ಸಂಸ್ಕೃತವಾಗಲೀ ಆಗಲು ಸಾಧ್ಯವಿಲ್ಲ. ಕರ್ನಾಟಕ ಸರಕಾರ ತಾನು ಒಪ್ಪಿಕೊಂಡ ಭಾಷಾ ಸಮುದಾಯದಲ್ಲಿ ಕರಾಡಿ ಎಂದೇ ಹೆಸರಿಸಿ ಈ ಭಾಷೆಗೆ ಮಾನ್ಯತೆ ಕೊಟ್ಟಿದೆ.

ಶಬ್ದಕೋಶದವರು ಕರ್ಹಾಡ ಇಲ್ಲವೇ ಕರ್ಹಾಡದಿಂದ ಬಂದವರು ಕರಾಡಿಗಳೆಂದು ಸ್ಪಷ್ಟವಾದ ವಿವರಣೆ ನೀಡಿದ್ದಾರೆ. ಕರ್ಹಾಡ ಬ್ರಾಹ್ಮಣರು ಕೊಂಕಣದ ಕರ್ಹಾಡದವರಿರಲಿ, ಗೋದಾವರಿ ತೀರದ ಕರ್ಹಾಟದವರಿರಲಿ, ಕರಾಡಿಯವರ ಭಾಷೆ ಕರ್ಹಾಡಿ, ಕರಾಡಿಯೇ ಆಗಿದೆ. ಬೇರೆ ಭಾಷಿಕರು ಕರಾಡ ಬ್ರಾಹ್ಮಣರನ್ನು 'ಕರಾಡಿ' ಎಂದೇ ಗುರುತಿಸುತ್ತಿದ್ದಾರೆ.

ಕರ್ಹಾಡರ ಮಾತೃಭಾಷೆ ಮರಾಠಿಯಾಗಿದೆ. ಆದರೆ ಕಾಸರಗೋಡು, ಪುತ್ತೂರು, ಸುಳ್ಯ, ಬಂಟ್ವಾಳ, ಬೆಳ್ತಂಗಡಿಗಳಲ್ಲಿರುವ ಕರ್ಹಾಡರು ಮಾತನಾಡುವ ಭಾಷೆ ಮರಾಠಿ ಭಿನ್ನವಾಗಿದ್ದು ಇದೀಗ "ಕರ್ಹಾಡಿ"

ಎಂದು ಹೆಸರಿಸಲ್ಪಟ್ಟಿದೆ. ಮೂಡುಬಿದಿರೆ, ಮಂಗಳೂರು, ಉಡುಪಿ ಮೊದಲಾದೆಡೆಗಳಲ್ಲಿರುವ ಕರ್ಹಾಡರು ಈಗಲೂ ಮರಾಠಿಯನ್ನೇ ಮಾತನಾಡುತ್ತಾರೆ. ಕರಾಡ ಬ್ರಾಹ್ಮಣರಲ್ಲದೆ ಮರಾಠಿ ನಾಯ್ಕ ಸಮುದಾಯದವರು, ಸಮಗಾರರು, ನರ್ಸಣ್ಣ ಪಂಗಡದವರು (ಹಾಲಕ್ಕಿ ಗೌಡರು) ಸೇರ್ವೆಗಾರರು (ವಾದ್ಯದವರು) ಮರಾಠಿ ಮಾತನಾಡುತ್ತಾರೆ. ಕರ್ಹಾಡರು ಮಾತನಾಡುವ ಮರಾಠಿಗೂ ಇತರರು ಆಡುವ ಮರಾಠಿಯ ಮೇಲೆ ತುಳು ಭಾಷೆಯ ಪ್ರಭಾವ ಬಿದ್ದಿರುವುದು ಗೋಚರಿಸುತ್ತಿದ್ದು ಅವರಾಡುವ ಭಾಷೆಯಲ್ಲಿಯೂ ವ್ಯತ್ಯಾಸವಿದೆ. ಹಾಗೆಯೇ ಚಿತ್ಪಾವನರೂ ಕೂಡ ಮರಾಠಿ ಮಾತನಾಡುತ್ತಾರೆ. ಆದರೆ ಡಾ। ಪ್ರಭಾಕರ ಜೋಶಿಯವರು "ಚಿತ್ಪಾವನರ ಭಾಷೆ "ಚಿತ್ಪಾವನಿ" ಇದು ಪ್ರಾಚೀನ ಮರಾಠಿಯ ರೂಪ. ಹವ್ಯಕರ ಹಳೆಗನ್ನಡ ಹೇಗೋ ಹಾಗೆ ಹಳೆಯ ಮಾರಾಠಿ. ಆದರೆ ರತ್ನಗಿರಿಯ ಭಾಷೆಯಲ್ಲಿ ಸ್ವಲ್ಪ ಕೊಂಕಣಿಯ ಛಾಪು ಇದೆ. ಚಿತ್ಪಾವನರ ಭಾಷೆ ಮರಾಠಿಯಾಗಿದ್ದು ಅವರು ಪೂನಾ ಮೂಲಕ ವಿಸ್ತರಿಸಿದ ಬಳಿಕ ಸೀಮಿತ ಗುಂಪುಗಳಲ್ಲಿರುವ ಕನ್ನಡ, ಹಿಂದಿ ಸ್ವೀಕೃತವಾಗಿದೆ. ಇದು ಈಚೆಗಿನ ಬೆಳವಣಿಗೆ. ಚಿತ್ಪಾವನಿಯರಲ್ಲಿ ಮರಾಠಿ ಮನೆಮಾತಾಗಿ 200 ವರ್ಷ ಆಗಿರಬಹುದು. ಮಾಲವಣದಿಂದ ಅರಸಿನಮಕ್ಕಿ ತನಕ ಚಿತ್ಪಾವನಿ ಜೀವಂತವಾಗಿದೆ. ಚಿತ್ಪಾವನಿ ಬಾಷೆ ಸುಮಾರು ಯಾದವ ಕಾಲೀನ ಮಹಾರಾಷ್ಟ್ರೀಯ ಕವಲು ಅನ್ನುವವರು. ಈಗ ಚಿತ್ಪಾವನಿ ಮಾತನಾಡುವವರು, ಸುಮಾರು ಐವತ್ತು ಸಾವಿರ ಜನ ಇರಬಹುದು. ದಕ್ಷಿಣ ಕನ್ನಡದಿಂದ ರತ್ನಗಿರಿ ತನಕ. ಚಿತ್ಪಾವನಿಯಲ್ಲೇ ಒಳಪ್ರಭೇದಗಳೂ ಇವೆ". ಎಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

೩.೪. ಕರ್ಹಾಡರ ಚಾರಿತ್ರಿಕ ಪೌರಾಣಿಕ ಹಿನ್ನೆಲೆ ಮತ್ತು ವಲಸೆಗಳ ವಿಚಾರಗಳು:

"ಕರ್ಹಾಡ ಬ್ರಾಹ್ಮಣರು ಯಾರು? ಯಾವಾಗ ಈ ಪ್ರದೇಶಕ್ಕೆ ಬಂದರು? ಯಾವ ಕಾರಣಗಳಿಂದ ಬಂದರು? ಇವರ ಆಚಾರ ವಿಚಾರಗಳೇನು? ಸಂಸ್ಕಾರಗಳಾವುವು? ಜೀವಿತ ವೃತ್ತಿಯಾವುದು? ಎನ್ನುವ ಪ್ರಾಕ್ತನ ವಿಚಾರಗಳು ಸ್ಪಷ್ಟವಾಗಿ ತಿಳಿದು ಬರುವುದಿಲ್ಲ. ಸಮಾಜದ ಕೆಲವು ಹಿರಿಯರು ಈ ಕುರಿತು ಹೇಳುವ ಸಂಗತಿಯನ್ನು ತರ್ಕ ಬದ್ಧವಾಗಿ ವಿಚಾರ ಮಾಡಿದಾಗ ಅವೆಲ್ಲಾ ಸಂದೇಹಸ್ಪಾದವಾಗಿ ತೋರುತ್ತದೆ. ಅವರು ಹೇಳುವ ಅನೇಕ ವಿಚಾರಗಳಿಗೆ ಸರಿಯಾದ ಆಧಾರಗಳಿಲ್ಲ. ಹೀಗಿರುವಾಗ ಆ ಮಾತುಗಳನ್ನು ಆಪ್ತ ವಾಕ್ಯ ಪ್ರಮಾಣವೆಂದು ನಂಬಿಕೊಂಡು 'ಇದಮಿತ್ಥಂ' ಎನ್ನುವುದರಿಂದ ಸತ್ಯಕ್ಕೆ ಅಪಚಾರ ಮಾಡಿದಂತಾಗುವುದು. ಆದರೆ ಆಳವಾದ ವ್ಯಾಪಕವಾದ ಸಂಶೋಧನೆಗಳಿಂದ ಸತ್ಯವನ್ನು ಬೆಳಕಿಗೆ ತರಲು ಸಾಧ್ಯವಾಗಬಹುದು" ಎಂಬ ಶ್ರೀ ಉಪ್ಪಂಗಳ ನಾರಾಯಣ ಶರ್ಮರ ಮಾತು ಸತ್ಯ.

ಕರ್ಹಾಡ ಬ್ರಾಹ್ಮಣರ ಬಗ್ಗೆ ಅವರ ಮೂಲದ ಬಗ್ಗೆ ಶೋಧನೆಗಿಳಿದಾಗ 'ಸಹ್ಯಾದ್ರಿ ಖಂಡ'ದ ಉಲ್ಲೇಖ ದೊರೆಯುತ್ತದೆ. (ಡಾ। ಸದಾಶಿವ ಭಟ್ಟರ ಗ್ರಂಥದಲ್ಲಿ ಸಹ್ಯಾದ್ರಿ ಖಂಡದಲ್ಲಿರುವ ಶ್ಲೋಕಗಳ ಪೂರ್ಣ ವಿವರವಿದೆ).

ಡಾ। ಪಿ. ಗುರುರಾಜಭಟ್ಟರು ತಮ್ಮ 'ತುಳುನಾಡು' (೧೯೬೩) ಪುಸ್ತಕದಲ್ಲಿ ಈ ರೀತಿ ಬರೆದಿದ್ದಾರೆ. "ಖರಾಡಿ ಬ್ರಾಹ್ಮಣರು ಖರಾಷ್ಟ್ರ ಎಂದರೆ' 'ಸತಾರಾ'ದ ಸುತ್ತಮುತ್ತಲಿಂದ ಇವರು 'ತುಳುವ' ಕ್ಕೆ ಬಂದವರಾಗಿರುತ್ತಾರೆ. ಇವರು ಸ್ಮಾರ್ತರಾಗಿದ್ದು ಶೃಂಗೇರಿ ಮಠದ ಶಿಷ್ಯರಾಗಿರುವರು.

ಡಾ। ಗುರುರಾಜಭಟ್ಟರ ಅಭಿಪ್ರಾಯವನ್ನು ಒಪ್ಪದ ಸೀತಾರಾಮಾಚಾರ್ಯ ನಾರಾಯಣಾಚಾರ್ಯ ಉಡುಪ ಎಂಬವರು ತಮ್ಮ "ಇತಿಹಾಸದ ಯಥಾರ್ಥತೆ ಎಂಬ ಪುಸ್ತಕದಲ್ಲಿ "ಕಟುಕರವನಲ್ಲಿ

ವಿಶ್ವಾಸವಿಡಬಹುದು, ಆದರೆ ಖರಾಡೆಯವರ ಮೇಲೆ ವಿಶ್ವಾಸವಿಡಲು ಸಾಧ್ಯವಿಲ್ಲ" ಎಂಬ ಗಾದೆ ಮಾತನ್ನು ಬಳಸಿದ್ದಾರೆ. ಇಂತಹ ಗಾದೆ ಮಾತುಗಳು ಚಾರಿತ್ರಿಕ ಆಧಾರಗಳಲ್ಲ.

ಶ್ರೀ ಮಂಜೇಶ್ವರ ಮುಕುಂದ ಪ್ರಭು ಅವರು 'ಇತಿಹಾಸದ ಯಥಾರ್ಥತೆ' ಒಂದು ವಿವೇಚನೆಯಲ್ಲಿ, ಇತಿಹಾಸದ ಯಥಾರ್ಥತೆಯ ಉಲ್ಲೇಖವನ್ನು ಅಲ್ಲಗಳೆದಿದ್ದಾರೆ, ಈ ಕೃತಿಯ ಗ್ರಂಥಕರ್ತರು ಕರಾಡ ಬ್ರಾಹ್ಮಣರು, ಚಿತ್ಪಾವನರು, ಗೌಡ ಸಾರಸ್ವತರು, ಶಿವಳ್ಳಿಯವರು ಇವರ ವಿಷಯಗಳನ್ನು ಸಹ್ಯಾದ್ರಿಯ ಆಧಾರದಿಂದಲೂ, ಕೆಲವೊಂದು ನ್ಯಾಯಾಲಯಗಳ ತೀರ್ಮಾನಗಳಿಂದಲೂ ಉದಾಹರಿಸಿದ್ದಾರೆ. ಇವುಗಳಲ್ಲಿ ಹೆಚ್ಚಿನವು ಅಸಂಗತ ಕೆಲವು ಗ್ರಂಥ ಕರ್ತರ ನಿಲುಮೆಗೆ ವಿರೋಧವಾಗಿರುವಂತಹವು. ಸರ್ವ ಸಾಧಾರಣ, ಸಕಲ ಭಾರತೀಯ ಪ್ರಮಾಣವೆಂದು ಭಾವಿಸುವ ಪರಮಪೂಜ್ಯ ಪ್ರಮಾಣ ಗ್ರಂಥ ಸಹ್ಯಾದ್ರಿ ಖಂಡ (ಪು.೧೩೭೪) ಎಂದು ಗ್ರಂಥ ಕರ್ತರು ಹೇಳಿದ್ದರೂ, ಅದು ಅರ್ವಾಚೀನ ಗ್ರಂಥ. ಆ ಸೇತು ಹಿಮಾಚಲ ಪ್ರಚಲಿತವಲ್ಲ. ಈ ಪರಶುರಾಮ ಕ್ಷೇತ್ರದಲ್ಲಿ ಮಾತ್ರ ಪ್ರಚಲಿತವಿರುವ ಗ್ರಂಥವೆಂದು ನಾವು ಪುನರುಚ್ಚರಿಸಬೇಕಾಗಿದೆ. ಆದ್ದರಿಂದ ಡಾ। ಭಟ್ಟರಾಗಲಿ, ಇನ್ನಾರೇ ಆಗಲಿ, ಪ್ರಾಮಾಣಿಕವಾಗಿ ಸಂಶೋಧನೆಗೆ ಆಧಾರವಾಗಿ ಇಟ್ಟುಕೊಳ್ಳುವುದು ಸರಿಯಲ್ಲ".

ಜೇಮ್ಸ್ ಕೇಂಬೆಲ್ (೧೮೮೩) ರ ಹೇಳಿಕೆ ಹೀಗಿದೆ:

ಕರಾಡ ಬ್ರಾಹ್ಮಣರು ಕೊಯಿನಾ ಮತ್ತು ಕೃಷ್ಣಾ ನದಿಗಳು ಸೇರುವಲ್ಲಿರುವ 'ಸತಾರಾ'ದಿಂದ ಬಂದವರು. ಅವರು ಸತಾರಾ ಕರ್ಹಾಡರೊಡನೆ ಊಟ ಮತ್ತು ಮದುವೆಯನ್ನು ಮಾಡಿಕೊಳ್ಳುತ್ತಾರೆ. ಅವರ ಗೋತ್ರಗಳು ವಸಿಷ್ಟ, ಮೈತ್ರೇಯ, ವರುಣ, ಕೌಂಡಿನ್ಯ, ಕೌಶಿಕ, ಕಾಶ್ಯಪ, ಭಾರದ್ವಾಜ, ಅತ್ರಿ, ಗೌತಮ ಮತ್ತು ವಿಶ್ವಾಮಿತ್ರ ಭಾಷೆಯನ್ನು ಹೊರತು ಪಡಿಸಿ, ಕರ್ಹಾಡದವರು, ಸತಾರರಿಗಿಂತ ಸ್ವಲ್ಪವೇ ಭಿನ್ನರಾಗಿದ್ದಾರೆ. ದಿ। ವಾಸುದೇವ ಆಠಲೆ ಮತ್ತು ಕೆಲವು ವಿದ್ವಾಂಸರು ಕರ್ಹಾಡ ಮತ್ತು ಕಾರಾಷ್ಟ್ರ ಬ್ರಾಹ್ಮಣರ ಬಗ್ಗೆ ಕೆಲವು ಅಭಿಪ್ರಾಯಗಳನ್ನು ತಿಳಿಸಿದ್ದಾರೆ.

"ನರ್ಮದಾಯಾಶ್ವ ಕೃಷ್ಣಾಯಾ ದೇಶೇ ಮಧ್ಯ: ಪ್ರಕೀರ್ತಿತ:"

ನರ್ಮದೆಯ ದಕ್ಷಿಣ ಕಡೆಯ ಹಾಗೂ ಕೃಷ್ಣಾ ನದಿಯ ಪಶ್ಚಿಮ ಕಡೆಯ ಪ್ರದೇಶಕ್ಕೆ ಮಧ್ಯ ದೇಶವೆಂದು ಸಹ್ಯಾದ್ರಿಯಲ್ಲಿದೆ. 'ಕರ್ಹಾಟ ಮಹಾತ್ಮ್ಯೆ" ಎಂಬ ಒಂದು ಗ್ರಂಥವು ಪ್ರಸಿದ್ಧವಿದ್ದು ಅದರ ಪ್ರಥಮಾಧ್ಯಾಯದಲ್ಲಿ ಈ ಶ್ಲೋಕವಿದೆ.

ಮಧ್ಯದೇಶೇ ಮಹಾಕ್ಷೇತ್ರಂ ನಾಮ್ನ ಶ್ರೀ ಕರಹಾಟಕಂ।
ಯತ್ನ ಶ್ರೀ ಕೃಷ್ಣ ವೇಣ್ಯಾಯಾ: ಕಕುದ್ಮತ್ಯಾಶ್ಚ ಸಂಗಮ:॥
ರಾಜಧಾನೀ ತವಪಿತು: "ಕರಹಾಟಕ" ಸಂಜ್ಞಿತಾ।

ಮಧ್ಯ ದೇಶದಲ್ಲಿ ಕೃಷ್ಣ ವೇಣಿ ಹಾಗೂ ಕೋಯನಾಗಳ ಸಂಗಮವಿದ್ದು ಇಲ್ಲಿ ಶ್ರೀ ಕರಹಾಟಕನೆಂಬ ಹೆಸರಿನ ಮಹಾಕ್ಷೇತ್ರವಿದೆ. ನಿನ್ನ ತಂದೆಯ ರಾಜಧಾನಿ 'ಕರಹಾಟಕ' (ಕರ್ಹಾಡ) ಎಂಬುದಾಗಿದೆ.

ಉಪಲಬ್ದವಿರುವ ಇತಿಹಾಸದಿಂದ ಸ್ಪಷ್ಟ ಗೋಚರವಾಗುವುದೇನೆಂದರೆ ಕೊಂಕಣದಲ್ಲಿರುವಂತಹ ಕರ್ಹಾಡ ಬ್ರಾಹ್ಮಣರ ಮನೆಗಳವರು, ಇತ್ತೀಚೆಗೆ ಕೊಂಕಣದಿಂದ ಬೇರೆ ಬೇರೆ ಸ್ಥಳಗಳಿಗೆ ಹೋಗಿರುತ್ತಾರೆ. ಅವರೆಲ್ಲರೂ ಮೊದಲು ಸಹ್ಯಾದ್ರಿಯ ಮಧ್ಯ ಪ್ರದೇಶದಿಂದ ಮತ್ತು ಗುಜರಾತದಿಂದ ಬಂದವಾರಾಗಿರುತ್ತಾರೆ.

ಕರ್ನಾಟಕ ಪ್ರಾಂತದಿಂದ ರತ್ನಗಿರಿ ಜಿಲ್ಲೆಗೆ ಶಿಲಾಹಾರರು ಕರೆದೊಯ್ದು ಮತ್ತು ಕಮಲಾ ದೇವಿ ಹಾಗೂ ಮಾಧವ ಮಂತ್ರಿ ಗೋಮಾಂತಕದಿಂದ ಕರೆ ತಂದ ಬ್ರಾಹ್ಮಣರೆಲ್ಲರೂ ಋಗ್ವೇದ ಶಾಕಲ ಶಾಖೆಯ ಅಶ್ವ ಲಾಯನ ಸೂತ್ರಾನುಯಾಯಿಗಳಾಗಿದ್ದು, ಈ ಎಲ್ಲಾ ಬ್ರಾಹ್ಮಣರಿಗೆ ಕರ್ಹಾಡೆ ಎಂಬ ಜಾತಿ ವಾಚಕ ಹೆಸರು ಪ್ರಾಪ್ತವಾಗಿತ್ತು.

ಕರ್ಹಾಡೆ ಜಾತಿಯಲ್ಲಿ ಕೇವಲ ಒಂದೇ ವೇದ ಋಗ್ವೇದ ಪ್ರಚಲಿತವಿದ್ದುದರಿಂದ ಹಾಗೂ ಕರಹಾಟಕ ಪ್ರಾಂತ್ಯದಲ್ಲಿ ಪ್ರಾಚೀನ ಕಾಲದಲ್ಲಿ ಕೂಡಾ ದ್ವಿವೇದಿಗಳಿಲ್ಲದ ಕಾರಣ, ಕೊಂಕಣಕ್ಕೆ ಹೋಗುವ ಮುನ್ನ ಅವರು ಆ ಪ್ರಾಂತದಲ್ಲಿ ವಾಸಿಸಿರಬೇಕು. ಮತ್ತು ಅಲ್ಲಿಂದಲೇ ಕೊಂಕಣದಲ್ಲಿ ಬಂದಿಳಿದಿರಬೇಕೆಂಬುದು ನಿರ್ವಿವಾದ ಮತ್ತು ಖಚಿತ. ಅದೇ ರೀತಿ ಅವರು ಕರ್ಹಾಡದಿಂದ ಹೋದದ್ದರಿಂದ ಅವರಿಗೆ 'ಕರ್ಹಾಡೆ' ಎಂಬ ಜಾತಿವಾಚಕ ಹೆಸರನ್ನು ಕೊಂಕಣದಲ್ಲಿ ಕೊಡಲಾಗಿರಬೇಕೆಂಬುದು ಸಹಜ ಔಚಿತ್ಯಪೂರ್ಣವಾಗಿದೆ.

ಗೋದಾವರಿ ತೀರದಿಂದ ಬಂದ ಸತ್ಯವಾದಿ (ಮಾವಳಂಗಕರ) ಕರಹಾಟಕದಿಂದ ಬಂದ ಅಠಲೇ, ಕಾತ್ರೆ, ಸಪ್ರೆ, ಪಿತ್ರೆ ಇವರೆಲ್ಲರೂ ಮೊದಲಿನಂತೆ ಋಗ್ವೇದೀ ಅಶ್ವಲಾಯನ ಸೂತ್ರಾನುಯಾಯಿ ಮತ್ತು ಶಾಕಲ ಶಾಖೆಯವರಾಗಿದ್ದ ಕಾರಣ ಅವರೂ ಕೂಡಾ ಕರ್ಹಾಡೆ ಬ್ರಾಹ್ಮಣರಲ್ಲಿ ಸೇರಿ ಕೊಂಡರು.

ಕರ್ಹಾಡ ಪಟ್ಟಣವು ಕಳೆದ ೩೦೦೦ ವರ್ಷಗಳ ಹಿಂದಿನಿಂದಲೂ ಪ್ರಸಿದ್ಧವಿತ್ತು. ಕರ್ಹಾಡ ಪಟ್ಟಣವು ಕರಹಾಟಕ ಪ್ರಾಂತದ ರಾಜಧಾನಿ. ಕೊನೆಯ ಪಕ್ಷ ಕಳೆದ ೧೦೦೦ ವರ್ಷಗಳಿಂದ ಪ್ರಸಿದ್ಧವಾಗಿತ್ತೆಂದು ನಿಸ್ಸಂದೇಹವಾಗಿ ಹೇಳಬಹುದು.

ಕ್ರಿ.ಶ. ೧೩೯೬ ರಲ್ಲಿ ಮಹಾರಾಷ್ಟ್ರಗಳಲ್ಲಿ 'ದುರ್ಗಾದೇವಿ' ಎಂಬ ಹೆಸರಿನ ಬರಗಾಲ ಬಂದಿದ್ದು ಸತತ ೧೨ ವರ್ಷಗಳ ವರೆಗೆ ಮುಂದುವರಿಯಿತು. ಇದರಿಂದಾಗಿ ಎಲ್ಲ ಜಾತಿಯ ಅನೇಕ ಕುಟುಂಬಗಳು ತಾವಾಗಿಯೇ ಮನೆ ಮಠ ಆಸ್ತಿ ಪಾಸ್ತಿಗಳನ್ನು ಬಿಟ್ಟು, ಕೊಂಕಣಕ್ಕೆ ಓಡಿ ಬಂದರು. ಇದಾದ ಮೇಲೆ ೧೪೬೮ ರಿಂದ ೧೪೭೫ ರ ಅವಧಿಯಲ್ಲಿ ದುರ್ಗಾ ದೇವಿ ಹೆಸರಿನ ಎರಡನೇ ಬರಗಾಲ ಬಂತು. ಈ ವೇಳೆಯಲ್ಲಿ ಕಷ್ಟಕ್ಕೆ ಗುರಿಯಾದ ಕೆಲವು ಕುಟುಂಬಗಳು ಕೊಂಕಣದಲ್ಲಿ ಬಂದು ಸ್ಥಾಯಿಯಾಗಿ ನೆಲೆಸಿದವು.

ಗುರ್ಜರ ಬ್ರಾಹ್ಮಣರು ಋಗ್ವೇದೀಯ ಅಶ್ವಲಾಯನ ಸೂತ್ರಾನುಯಾಯಿಗಳು ಮತ್ತು ಶಾಕಲ ಶಾಖೆಯವರಾಗಿದ್ದ ಕಾರಣ ಹಾಗೂ ಇಲ್ಲಿ ಕರ್ಹಾಡೆ ಬ್ರಾಹ್ಮಣರು ಕೂಡಾ ಅದೇ ವೇದ ಅದೇ ಸೂತ್ರದವರಿದ್ದ ಕಾರಣ ಅವರು ಕೂಡಾ ಕರ್ಹಾಡೆ ಬ್ರಾಹ್ಮಣರಲ್ಲಿ ಸೇರಿ ಕೊಂಡರು. ಅವರು ಸಾಮಾನ್ಯ ೧೨ನೇಯ ಶತಮಾನದಲ್ಲಿ ಬಂದಿರಬೇಕು.

ಶಕ ೧೧೧೯ ರಲ್ಲಿ ಕಮಲಾದೇವಿಕೊಟ್ಟ ತಾಮ್ರ ಪಟದಲ್ಲಿ ಉಲ್ಲೇಖಿತ ಬ್ರಾಹ್ಮಣರೆಲ್ಲರೂ ಒಂದೇ ನಾಡಿನವರಿರದೆ ಅನೇಕ ದೇಶದವರಾಗಿದ್ದರೆಂಬುದು "ನಾನಾದೇಶ ನಿವಾಸಿನ:"ದಿಂದ ಸಿದ್ಧವಾಗುತ್ತದೆ. ಇದಕ್ಕೆ ಮೊದಲು ಶಿಲಾಹಾರ ರಾಜರು ಕರಹಾಟಕ ಪ್ರಾಂತದಿಂದ ಕೆಲವು ಬ್ರಾಹ್ಮಣರನ್ನು ರತ್ನಗಿರಿಗೆ ಕರೆದೊಯ್ದರೆಂಬ ಬಗ್ಗೆ ಅನೇಕ ತಾಮ್ರ ಪಟಗಳಿಂದ ಗೋಚರವಾಗುವುದೆಂದು ಈ ವರೆಗಿನ ವಿವೇಚನೆಯಿಂದ ತಿಳಿದು ಬರುವುದು.

ಕರ್ಹಾಡೆ ಜನರು ಸಮುದ್ರದಂಡೆಗೆ ಬಂದು ನೆಲೆಸದೆ, ಸಹ್ಯಾದ್ರಿಯ ಅಡಿಯಿಂದ ಪಶ್ಚಿಮದ ಕಡೆಗೆ ಅವರ ವಸತಿ ಹಬ್ಬಿದಂತೆ ಕಂಡು ಬರುತ್ತದೆ. ಆದರೆ ಅವರ ಮನೆಗಳು ನಗರಗಳಲ್ಲಿರುವ ಮನೆಗಳಂತೆ

ಕಟ್ಟಿರುವ ಹಾಗೆ ಕಾಣುವುದಿಲ್ಲ. ಬೇರೆ ಬೇರೆ ಸಮಯಗಳಲ್ಲಿ ಆಗಮಿಸಿದ್ದರಿಂದ ನೀರು ಹಾಗೂ ಕೃಷಿಗೆ ಅನುಕೂಲವಿರುವ ಸ್ಥಳಗಳಲ್ಲಿ ಮನೆಗಳನ್ನು ಕಟ್ಟಿಕೊಂಡರು. ಈ ಪದ್ಧತಿಯಿಂದ ಇವರ ಮನೆಗಳು ಎಲ್ಲೆಡೆ ಹರಡಿದಂತೆ ಕಾಣುತ್ತದೆ. ಹೀಗೆ ಆಠಲೆಯವರು ತಮ್ಮ ಕರ್ಹಾಡೆ ಬ್ರಾಹ್ಮಣರು ಎನ್ನುವ ಪುಸ್ತಕದಲ್ಲಿ ಬರೆದಿದ್ದಾರೆ.

ಅಶ್ವ ಲಾಯನ ಸೂತ್ರದ ಶಾಕಲ ಶಾಖೆಯ ಕರ್ಹಾಡರು ಯಾಜ್ಞ ವಲ್ಕ್ಯ ಸ್ಮೃತಿಯ ಮೇರೆಗೆ ಸಹ್ಯಾದ್ರಿ ಪರ್ವತ ಮಾಳವದಿಂದ ಫಲವತ್ತಾದ ಭೂಮಿಯಾದ ತುಂಗ ಭದ್ರಾ, ಕೃಷ್ಣಾ ಮತ್ತು ಗೋದಾವರಿ ನದಿಗಳ ತೀರದವರೆಗೆ ಅಂದರೆ ಸದ್ಯದ ಆಂಧ್ರ ಪ್ರದೇಶದ ವರೆಗೆ ಹಬ್ಬಿದ್ದರು. ಅದರಂತೆ ಉತ್ತರ ಗುಜರಾತದ ವರೆಗೂ ಹಬ್ಬಿದ್ದರು. ವಿಜ್ಞಾನೇಶ್ವರರ ಮಿತಾಕ್ಷರದಲ್ಲಿ ಕ್ರಿ.ಶ. ೧೦೧೬-೧೧೨೬ ಕಾಲದಲ್ಲಿಯ ಕಾವ್ಯದ ಬಗ್ಗೆ ವಿಚಾರ ಮಾಡಿದಾಗ ಮೇಲಿನ ಪ್ರದೇಶಕ್ಕೆ ಹೋಗಿ ಒಂದು ಸಾವಿರ ವರ್ಷ ವಾಸ್ತವ್ಯ ಮಾಡಿದ್ದರು. ಈಗಿನ ಸತಾರಾ, ಸಾಂಗ್ಲಿ ಮತ್ತು ಕೊಲ್ಹಾಪುರ ಜಿಲ್ಲೆಗಳಿಗೆ ಕರ್ಹಾಟ ಪ್ರಾಂತವೆನ್ನುತ್ತಿದ್ದ ಸ್ಥಳದಲ್ಲಿ ಅವರು ವಾಸವಾಗಿದ್ದರು. ಈ ಪ್ರಾಂತದ ರಾಜಧಾನಿ 'ಕರ್ಹಾಟ' ಅಂದರೆ ಈಗಿನ ಕರ್ಹಾಡ. ಈ ಕರ್ಹಾಟದ ಉಲ್ಲೇಖ ಮಹಾಭಾರತದ ಸಭಾ ಪರ್ವದಲ್ಲಿ ಬಂದಿದೆ. ಕರ್ಹಾಟದ ಉಲ್ಲೇಖ ಸಹ್ಯಾದ್ರಿ ಕಾಂಡದಲ್ಲಿ ಬಂದಿದ್ದು, ಅದರಲ್ಲಿ ಈ ಪವಿತ್ರವಾದ ಕರ್ಹಾಟಕ ಕ್ಷೇತ್ರ ಕೃಷ್ಣ ವೇಣಿ ಮತ್ತು ಕೋಯನಾ ಇವುಗಳ ಸಂಗಮದಲ್ಲಿದೆ ಎಂದು ಹೇಳಲಾಗಿದೆ.

ಕ್ರಿ.ಶ. ಹನ್ನೊಂದನೇ ಶತಮಾನದಲ್ಲಿ ಶಿಲಾ ಹಾರರು ಕೊಂಕಣವನ್ನು ವಶಪಡಿಸಿ ಕೊಂಡರು. ಅವರು ದಾರ್ಮಿಕ ವಿಧಿಗಳನ್ನು ನೆರವೇರಿಸಲು ಅಶ್ವ ಲಾಯನ ಸೂತ್ರದ ಶಾಕಲ ಶಾಖೆಯ ಬ್ರಾಹ್ಮಣರನ್ನು ಅಲ್ಲಿ ಕರೆತಂದರು. ಇವರು ಅಲ್ಲಿ ಸ್ಥಾಯಿಯಾಗಿ ಉಳಿದರು. ಈ ಬ್ರಾಹ್ಮಣರು ಕರ್ಹಾಟ ಪ್ರಾಂತದಿಂದ ಬಂದದ್ದರಿಂದ ತಮ್ಮನ್ನು 'ಕರ್ಹಾಡೆ' ಎಂದು ಕರೆದುಕೊಳ್ಳ ತೊಡಗಿದರು. ಶಿಲಾಹಾರ ರಾಜರು ಮಾತೃಕಾ ದೇವಿಯ ಭಕ್ತರಾಗಿದ್ದರು. ಆದ ಕಾರಣ ಕರ್ಹಾಡೆ ಬ್ರಾಹ್ಮಣರೂ ಕೂಡಾ ದೇವಿಯ ಭಕ್ತರಾಗಿದ್ದರು. ಅವರು ಬೇರೆಬೇರೆ ಸ್ಥಳಗಳಿಗೆ ಹಬ್ಬ ತೊಡಗಿದಾಗ ಅನುಕೂಲಕ್ಕೋಸ್ಕರ ಆಸ್ಥಾನದ ದೇವಿಯರನ್ನು ಮಾತೃಕಾ ದೇವಿಯ ಪ್ರತೀಕವೆಂದು ತಿಳಿದು ಭಜಿಸ ತೊಡಗಿದರು. ಕೋಲ್ಹಾಪುರದ ಹತ್ತಿರ ನೆಲೆಸಿದವರು 'ಅಂಬಾ ಬಾಯಿ' ಯ ಭಕ್ತರಾದರು. ಗೋವೆಯಲ್ಲಿ ಪಸರಿಸಿದ ಬ್ರಾಹ್ಮಣರು ಮಹಾಲಸಾ, ಶಾಂತಾ ದುರ್ಗ ಅಥವಾ ವಿಜಯದುರ್ಗಾರನ್ನು ಭಜಿಸತೊಡಗಿದರು.

ಸಾರಸ್ವತರು ಹೇಗೆ ಗೋವೆಯನ್ನು ತಮ್ಮ ದೇವ ಭೂಮಿ ಮತ್ತು ಪಿತೃ ಭೂಮಿ ಎಂದು ತಿಳಿವರೊ, ಚಿತ್ಪಾವನರು ಚಿಪಳೂಣ-ಗುಹಾಗರ ಕಡೆಗೆ ನೋಡುವರೋ ಹಾಗೆಯೇ ಕರ್ಹಾಡರು ಕರ್ಹಾಡವನ್ನು ತಮ್ಮ ದೇವ ಭೂಮಿ, ಪಿತೃ ಭೂಮಿಯೆಂದು ತಿಳಿಯುವುದಿಲ್ಲ. ಇಂತಹ ಶ್ರದ್ಧಾ ಕಲ್ಪನೆಯ ಅಭಾವದಿಂದ ಅಲ್ಲಲ್ಲಿ ಹರಡಿದ ಕರ್ಹಾಡೆಯರಲ್ಲಿ ಏಕತೆಯ ಭಾವನೆ ಇಲ್ಲ.

ಕರ್ಹಾಡ ಬ್ರಾಹ್ಮಣರ ಮೂಲ ಗೋವೆಯೇ ಇರುವುದೆಂಬ ಕಲ್ಪನೆಯನ್ನು ಮಾನ್ಯ ಮಾಡಿದರೆ ಇವರು ಗೋವೆಗೆ ಎಲ್ಲಿಂದ ಬಂದರು? ಯಾವಾಗ ಬಂದರು? ಯಾಕೆ ಇಲ್ಲಿಂದ ಹೋದರು? ಯಾವಾಗ ಹೋದರು? ಪರಶು ರಾಮನು ಸಾರಸ್ವತರಂತೆ ಕರೆದು ತಂದಿರಬಹುದೇ?

ಗೋವೆಯ ಮೇಲೆ ಮುಸಲ್ಮಾನರು ಆಕ್ರಮಣ ಮಾಡಿದಾಗ ಕರ್ಹಾಡೆಯರು ಗೋವೆಯಿಂದ ಹೊರ ಬಿದ್ದಿರಬೇಕೆಂದು ಡಾ। ಗುಣೆಯವರ ಅಭಿಪ್ರಾಯವಾಗಿದೆ. ಈಗ ಉದ್ಭವಿಸುವ ಪ್ರಶ್ನೆ ಎಂದರೆ ಇಷ್ಟೊಂದು ಪ್ರಾಚೀನ ಕಾಲದಲ್ಲಿ ಕರ್ಹಾಡೆಯವರು ದೇಶ ಬಿಟ್ಟು ಹೋಗಿದ್ದರೆ? ಅವರು ಗೋವೆಗೆ ಯಾವಾಗ ಬಂದಿದ್ದರು?

ಅವರು ಗೋವೆಗೆ ಬರುವ ಕಾರಣವೇನಿತ್ತು? ಗೋವೆಯಲ್ಲಿ ಕೆಲವು ದೇವರು ಅವರ ಕುಲದೇವರು ಹೇಗಾದರು? ಈ ಕುಲದೇವರು ಬಹಳಷ್ಟು ಕರ್ಹಾಡೆಯವರದಾಗಿದ್ದು, ಕರ್ಹಾಡದಿಂದ ಕರ್ಹಾಡರೆಲ್ಲರೂ ಗೋವೆಗೆ ಬಂದಿದ್ದರೆ? ಅಲ್ಲದೆ ಕರ್ಹಾಡದಲ್ಲಿರುವಾಗ ಅವರಿಗೆ ಕುಲದೇವರಿರಲಿಲ್ಲ. ಅದಕ್ಕಾಗಿ ಗೋವೆಗೆ ಬಂದಿದ್ದರೆ? ಅವರು ಗೋವೆಗೆ ಬಂದು ಕೆಲಸ ಮುಗಿದ ಮೇಲೆ ಹೊರಟು ಹೋಗಿರಬಹುದೇ? ಇಂತಹದೇನಾದ್ದರೂ ನಡೆಯಿತೇ? ಕರ್ಹಾಡೆಯರು ಮೂಲತ: ಗೋವೆಯಲ್ಲಿದ್ದರು. ಮತ್ತು ಹೊಟ್ಟೆಪಾಡಿಗಾಗಿ ವಿಭಜನೆಯ ಹೆದರಿಕೆಯಿಂದ ಹೊರಬಿದ್ದರೆ? ಅಂದರೆ ಮತ್ತೆ ಮೂಲ ಪ್ರಶ್ನೆಯ ಕಡೆಗೆ ಬರುತ್ತೇವೆ. ಮೊದಲಿನಿಂದಲೂ ಗೋವೆಯಲ್ಲಿರುತ್ತಾ ಬಂದಿರುವ ಕರ್ಹಾಡೆ ಮನೆತನಗಳು ವೈದಿಕ ವೃತ್ತಿಯನ್ನು ಮಾಡುವವರಾಗಿದ್ದರು. ಅನೇಕ ಮನೆತನಗಳು, ವೇದವಿದ್ಯೆ, ಸಂಸ್ಕೃತ ಭಾಷೆ ಮತ್ತು ಜ್ಯೋತಿರ್ವಿದ್ಯೆಯಲ್ಲಿ ಪಾರಂಗತವಾಗಿರುವ ಈ ಜಾತಿಯು ಆತಿಥ್ಯಕ್ಕೆ ಹೆಸರಾಗಿದ್ದು ಖರ್ಚು ಮಾಡುವವರಾಗಿರುವರು.

"ಮಹಾರಾಷ್ಟ್ರ ಪ್ರಾಂತದಲ್ಲಿರುವ ಕರ್ಹಾಡ ಪ್ರದೇಶದಲ್ಲಿಂದ ಕರ್ಹಾಡ ಬ್ರಾಹ್ಮಣರು ೧೨೯೬ ರಿಂದ ೧೩೦೬ ಅಲ್ಲಾವುದೀನ್ ಖಿಲ್ಜಿಯ ಸೇನಾಪತಿಯಾಗಿದ್ದ ಮಾಲಿಕ್ ಕಾಫರನು ದಕ್ಷಿಣಕ್ಕೆ ಬಂದು ನಾಲ್ಕು ಸಲ ದಾಳಿ ಮಾಡಿದ್ದರಿಂದ ಊರು ಬಿಟ್ಟು ಈ ಕಡೆ ಬಂದರು". ಎಂದು ದಿ। ಸಜಂಕಿಲ ವೆಂಕಟೇಶ ಭಟ್ಟರು ಹೇಳಿದ್ದಾರೆ.

ಕ್ರಿ.ಶ. ೧೧ನೇಯ ಶತಮಾನದಲ್ಲಿ ಕೊಂಕಣವನ್ನು ಸ್ವಾಧೀನ ಪಡಿಸಿಕೊಂಡ ಶಿಲಾಹಾರರು ತಮ್ಮೊಂದಿಗೆ ಪುರೋಹಿತರಾದ ಅಶ್ವ ಲಾಯನ ಸೂತ್ರ ಶಾಕಲ ಶಾಖಿಯ ಬ್ರಾಹ್ಮಣರನ್ನು ಅಲ್ಲಿಗೆ ಕರೆತಂದರೆಂದೂ ಶಿಲಾಹಾರರ ರಾಜಧಾನಿಯಾದ ಕರ್‌ಹಾಟ್‌ನಿಂದ ಬಂದ ಈ ಬ್ರಾಹ್ಮಣರು ಕೊಂಕಣದ ಜನರಿಂದ 'ಕರ್ಹಾಡೆ' ಎಂದು ಕರೆಯಲ್ಪಟ್ಟರು.

"ಪ್ರಕೃತ ಇಲ್ಲಿರುವ ಕನ್ನಡ ಬ್ರಾಹ್ಮಣರಿಗಾದರೋ ತಮ್ಮ ಮೂಲ ಸ್ಥಾನವು ಮಹಾ ರಾಷ್ಟ್ರದ ಕರ್ಹಾಡ ಎಂಬ ಊರು ಎಂಬ ಸಂಗತಿ ಗೊತ್ತಿದೆಯಷ್ಟೆ ಹೊರತು, ಅಲ್ಲಿ ತಮ್ಮ ಕುಲಗೋತ್ರದವರು ಯಾರಿದ್ದಾರೆ? ಅಲ್ಲಿನ ನಡವಳಿಕೆಗಳೇನು? ಎಂಬ ವಿಚಾರ ಕಿಂಚಿತ್ತೂ ಗೊತ್ತಿಲ್ಲ.

ಗೋವಾ, ಸಾವಂತವಾಡಿ, ಸಿಂಧು ದುರ್ಗ, ಕಾರವಾರ ಮೊದಲಾದೆಡೆಗಳಲ್ಲಿ ಇಂದು ವಾಸ್ತವ್ಯವಿರುವ ಕರ್ಹಾಡ ಬ್ರಾಹ್ಮಣರಲ್ಲಿ ಕೇಳಿದರೂ, ನಾವು ಕರ್ಹಾಡದಿಂದ ಬಂದವರೆಂದು ಮಾತ್ರ ಹೇಳುತ್ತಾರೆ. ಅಷ್ಟೆ ಅಲ್ಲದೇ , ಬೇರಾವ ವಿಚಾರವೂ ಅವರಿಗೆ ತಿಳಿಯದು. ಕರ್ಹಾಡದ ಜೊತೆಗೆ ಯಾವ ಸಂಬಂಧವೂ ಇಲ್ಲ.

ಕರ್ಹಾಡದಲ್ಲಿ ಕರ್ಹಾಡರ ಬಗ್ಗೆ ಯಾವ ಕುರುಹೂ ಲಭಿಸುವುದಿಲ್ಲ. ಬೇರೆ ಕಡೆಯಿಂದ ಬಂದು, ಕರ್ಹಾಡದಲ್ಲಿ ನಿಂತಿದ್ದರೂ, ಅದನ್ನು ಉಲ್ಲೇಖಿಸ ಬೇಕಿತ್ತು. ಅದು ಎಲ್ಲಿಯೂ ಕಾಣುವುದಿಲ್ಲ.

"ಒಂದು ಸಮಾಜದ ಜನರು ತಮ್ಮ ತವರೂರಿನಿಂದ ಇನ್ನೊಂದು ದೇಶಕ್ಕೆ ವಸಾಹತು ಮಾಡಲು ಹೋದರೆ, ತಮ್ಮ ಮಾತೃ ದೇಶವನ್ನು ಯಾ ಭಾಷೆಯನು ಸೂಚಿಸುವ ಜಾತಿ ಹೆಸರನ್ನು ತಮ್ಮ ಪಂಗಡಕ್ಕೆ ಇಟ್ಟು ಕೊಳ್ಳುವುದಲ್ಲದೆ, ತಾವು ನೆಲೆ ನಿಂತ ದೇಶದ ಯಾ ಪ್ರದೇಶದ ಯಾ ಒಂದು ಗ್ರಾಮದ, ಯಾ ಊರನ್ನು ತಮ್ಮ ಜಾತಿ ಯಾ ಕುಲ ವಾಚಕವಾಗಿ ಮಾಡಿ ಕೊಂಡದ್ದು ಚರಿತ್ರೆಯಲ್ಲಿ ಕಂಡು ಬರುವುದು ವಿರಳ" ಡಾ.ಪಿ. ಗುರುರಾಜ ಭಟ್ಟರ ಮಾತಿದು ಗಮನಾರ್ಹ.

ದ. ಕನ್ನಡ ಕಾಸರಗೋಡುಗಳಲ್ಲಿ ಕರ್ಹಾಡ ಬ್ರಾಹ್ಮಣರನ್ನು ಪದ್ಯರೆಂದು ಹೇಳುವುದು ರೂಢಿ. ಕರಾಡಿ ಹಾಗು ಪದ್ಯರು ಒಂದೇ ಪಂಗಡದವರೆನ್ನುವ ಭಾವನೆಯೇ ಇದಕ್ಕೆ ಕಾರಣ. ಕರಾಡಿ ಹಾಗೂ ಪದ್ಯರೊಳಗೆ ವ್ಯತ್ಯಾಸವಿದೆ. ಕಿಟ್ಟೆಲ್ ನಿಘಂಟಿನಲ್ಲಿ – ಕರಾಡಿ ಎನ್ನುವುದಕ್ಕೆ "A class of Brahmins" ಎಂದಿದ್ದಾರೆ, ಪದ್ಯ ಎನ್ನುವುದಕ್ಕೆ "A Sudra" ಎಂದಿದೆ. ಕಸ್ತೂರಿ ಕನ್ನಡ – ಕನ್ನಡ ಕೋಶದಲ್ಲಿ ಪದ್ಯ (ಸಂ) ಶೂದ್ರ; ಸಂಸ್ಕೃತ – ಕನ್ನಡಕೋಶ – ಪದ್ಯ (ಸಂ) ಶೂದ್ರ; ವಿ.ಎಸ್. ಆಪ್ಟೆಯವರ – The students Sanskrit English Dictionary " ಯಲ್ಲಿ ಪದ್ಯ: A sudra –ಹೀಗೆ ಎಲ್ಲಾ ನಿಘಂಟುಗಳಲ್ಲಿ ಶೂದ್ರ ಎಂಬ ಅರ್ಥವನ್ನೇ ಕೊಟ್ಟಿದ್ದಾರಲ್ಲದೇ ಬ್ರಾಹ್ಮಣರೆನ್ನುವ ಅರ್ಥವಿಲ್ಲ.

೩.೫ ದಕ್ಷಿಣ ಕನ್ನಡ ಮತ್ತು ಕಾಸರಗೋಡಿಗೆ ಕರ್ಹಾಡಸ್ಥರ ವಲಸೆ:

ಕರ್ಹಾಡರು "ಧರ್ಮಸಿಂಧು" ವನ್ನು ತಮ್ಮ ಧರ್ಮಗ್ರಂಥವೆಂದು ಸ್ವೀಕರಿಸಿದ್ದಾರೆ. ಗ್ರಂಥಕರ್ತ ಕಾಶೀನಾಥೋಪಾಧ್ಯಾಯ (ಜನನ ಶಕವರ್ಷ ೧೬೫೬) ಕೊಂಕಣ ದೇಶದ ರತ್ನಗಿರಿ ಮಂಡಲಾಂತರ್ಗತ ಸಂಗಮೇಶ್ವರ ಗ್ರಾಮದೊಳಗಿನ ಗೋವಳದವನು. ಕಾಶ್ಯಪ ಗೋತ್ರ, ಪಾಧ್ಯೆ ಕುಲ ಪ್ರದೇಶ ಬಿಟ್ಟು ಪಂಡರೀಪುರ ವಾಸ. ೧೭೧೨ ರಲ್ಲಿ 'ಧರ್ಮ ಸಿಂಧು' ರಚನೆ. ತಮ್ಮ ಊರಿನವನು, ಜಾತಿಯವನು ಬರೆದನೆನ್ನುವುದರಿಂದಲೂ ಇದಕ್ಕೆ ಪ್ರಾಶಸ್ತ್ಯ. ಹೀಗೆ ಹಲವಾರು ವಿಚಾರಗಳನ್ನು ಗಮನಿಸುವಾಗ ಇಲ್ಲಿಯ ಕರ್ಹಾಡರು ಗೋವಾದಿಂದಲೇ ಬಂದದ್ದೆಂದು ಹೇಳ ಬಹುದು. ಗೋದಾವರೀ ತೀರದಿಂದ ಬರುವಾಗಲೇ ಸಾರಸ್ವತರ ಜೊತೆ ಬಂದವರೆನ್ನಬಹುದು.

ದಕ್ಷಿಣಕನ್ನಡ ಹಾಗೂ ಕಾಸರಗೋಡಿಗೆ ಕರ್ಹಾಡರು ಯಾವಾಗ ಬಂದರು? ಹಿರಿಯ ವಿದ್ವಾಂಸರಾದ ಶ್ರೀ ಪೆರ್ಲ ಕೃಷ್ಣ ಭಟ್ಟರು,'ಗಡಿನಾಡ ಕಿಡಿ' (೧೯೯೦) ಯಲ್ಲಿ ಕರ್ಹಾಡ ಬ್ರಾಹ್ಮಣರು ಸುಮಾರು ೪೦೦–೫೦೦ ವರ್ಷಗಳ ಹಿಂದೆ ಇಲ್ಲಿಗೆ ವಲಸೆ ಬಂದಿದ್ದಾರೆ ಎಂದು ಬರೆದರೆ, 'ಕರಾಡ ರಜತ'ದಲ್ಲಿ ಲೇಖನದ ಆದಿಯಲ್ಲಿ ೩೦೦–೫೦೦ ವರ್ಷ ಹಿಂದೆ ಬಂದಿರ ಬಹುದೆಂದು ಬರೆದಿದ್ದಾರೆ. ಅದೇ ಲೇಖನದ ಕೊನೆಯಲ್ಲಿ ಎರಡು ಮೂರು ಶತಮಾನಗಳಷ್ಟು ಹಿಂದೆ ಇಲ್ಲಿಗೆ ವಲಸೆ ಬಂದಿರಬೇಕೆಂದು ಬರೆದಿದ್ದಾರೆ. ಇದೇ ರೀತಿ ಇನ್ನೂ ಕೆಲವರು ಬೇರೆ ಬೇರೆ ಕಾಲವನ್ನು ನಿಗದಿ ಪಡಿಸಿದ್ದಾರೆ.

ಅಗಲ್ಪಾಡಿ, ತೈರೆ, ಆವಳಪಂಜ, ಕೊಂಗೂರು ಈ ನಾಲ್ಕು ಮಠಗಳು ಕರ್ಹಾಡರ ಪ್ರಮುಖ ದೇವಾಲಯಗಳು. ಅಷ್ಟ ಮಂಗಲ ಪ್ರಶ್ನೆಯ ಪ್ರಕಾರ ಮೊದಲ ಮೂರು ಮಠಗಳ ಸ್ಥಾಪನೆಯಾಗಿ ೫೦೦ ರಿಂದ ೬೦೦ ವರ್ಷಗಳಾಗಿರಬೇಕೆಂದೂ, ಕೊಂಗೂರು ಮಠ ಸ್ಥಾಪನೆಯಾಗಿ ೪೦೦ ವರ್ಷಗಳು ಆದುವೆಂದೂ ತಿಳಿದು ಬರುತ್ತದೆ. ದೇವಸ್ಥಾನಗಳನ್ನು ನಂಬುವುದಾದರೆ ಜ್ಯೋತಿಷ್ಯವನ್ನು ನಂಬಲೇ ಬೇಕಾಗಿದೆ. ಚಾರಿತ್ರಿಕಾಂಶಗಳು ಇಲ್ಲಿ ಗೌಣ.

ಇಲ್ಲಿನ ಕರ್ಹಾಡ ಹೇಳಿಕೆ ಹಾಗೂ ನಂಬಿಕೆಯಂತೆ, ಕೊಂಗೂರು ಮಠ ಮೊದಲು ಸ್ಥಾಪನೆಯಾಗಿದೆ. ಆದರೆ ನಿಜ ಸ್ಥಿತಿ ಹಾಗಿದ್ದಂತೆ ಕಂಡು ಬರುವುದಿಲ್ಲ. ಕಾಸರಗೋಡು, ಪುತ್ತೂರು ತಾಲೂಕುಗಳಲ್ಲಿರುವ ಹೆಚ್ಚಿನ ಕರಾಡರು ಮೊದಲು ವಲಸೆ ಬಂದವರಾಗಿದ್ದು, ಮಂಗಳೂರು, ಮೂಡಬಿದಿರೆ, ಉಡುಪಿಗಳಲ್ಲಿರುವ ಕರ್ಹಾಡರು ಮತ್ತೆ ವಲಸೆ ಬಂದವರು. ಇದಕ್ಕೆ ಇವರು ಮಾತನಾಡುವ ಇವರ ಮಾತೃ ಭಾಷೆಯೇ ನಿದರ್ಶನ. ಮೊದಲು ಬಂದವರ

ಭಾಷೆ ತೀರಾ ಬದಲಾಗಿದೆ. ಅನಂತರ ಬಂದ ಇವರ ಭಾಷೆ ಬದಲಾಗದೆ 'ಮರಾಠಿ' ಯಾಗಿಯೇ ಉಳಿದಿದೆ. ಬದಲಾಗುವಷ್ಟು ಕಾಲಮಾನ ಅದಕ್ಕೆ ಸಿಗಲಿಲ್ಲವೆಂದೇ ಇದರರ್ಥ. ಇವರು ಮಾತನಾಡುವ ಮರಾಠಿಗೂ, ಮಹಾರಾಷ್ಟ್ರ ಪೂನಾ ಮರಾಠಿಗೂ ಹೆಚ್ಚು ಸಾಮ್ಯವಿದೆಯೆಂದು ಇವರೇ ಹೇಳುತ್ತಾರೆ. ಗೋವಾ ಕಡೆಯ ಮರಾಠಿ ದೂರ ಉಳಿದಿದೆ. ಹಾಗಾಗಿ ಗೋದಾವರಿ ತೀರದಿಂದ ಕೊನೆಯ ವಲಸೆಯಾಗಿ ಹೊರಟು ಗೋವಾ ಮೂಲಕ ಬಂದರೂ, ಅಲ್ಲೆಲ್ಲ ಹೆಚ್ಚು ಕಾಲ ನೆಲೆ ನಿಂತಿರಲಿಲ್ಲವೆನ್ನುವುದು ಸ್ಪಷ್ಟ. ಕಾಸರಗೋಡು ಪುತ್ತೂರು ಕಡೆಯ ಕರಾಡಿಯರು, ತಮ್ಮ ಅಡ್ಡ ಹೆಸರುಗಳನ್ನೆಲ್ಲ ಬಿಟ್ಟರೆ, ಇವರು ಈಗಲೂ ತಮ್ಮ ಅಡ್ಡ ಹೆಸರುಗಳನ್ನು ಇಟ್ಟು ಕೊಂಡಿದ್ದಾರೆ.

ಕಾಸರಗೋಡು ಪುತ್ತೂರು ಕಡೆಯ ಕರ್ಹಾಡ ಆಚಾರ, ಸಂಪ್ರದಾಯ ರೀತಿ ರಿವಾಜಿಗೂ ಇವರ ಕ್ರಮಕ್ಕೂ ತುಂಬಾ ವ್ಯತ್ಯಾಸವಿದೆ. ಇವರ ಆಚಾರ ಕ್ರಮಗಳು ಗೋವಾ, ಮಹಾರಾಷ್ಟ್ರ ಕಡೆಯ ಕರಾಡಿಯವರ ಕ್ರಮಗಳಂತೆ ಇವೆ ಎಂದು ಹೇಳುತ್ತಾರೆ. ಹಿಂದೆ ಕಾಸರಗೋಡು, ಪುತ್ತೂರು ಕಡೆಯವರು ಇವರನ್ನು, 'ಕುಡುಪಕಾರರು' ಎಂದು ಕರೆಯುತ್ತಿದ್ದು ಪ್ರತ್ಯೇಕ ಗುಂಪಾಗಿ ಕಾಣುತ್ತಿದ್ದರಲ್ಲದೆ, ದೈಹಿಕ ಸಂಬಂಧಗಳು ವಿಶೇಷವಾಗಿ ನಡೆಸುತ್ತಿರಲಿಲ್ಲ. ಹಾಗಾಗಿ ಇವರು ಬೇರೆಯಾಗಿಯೇ ಉಳಿದರು. ಈಗ ಈ ಪ್ರತ್ಯೇಕತೆ ಅಳಿಯಲಿಲ್ಲ. ಎದ್ದು ಕಾಣುತ್ತದೆ. ಕರ್ಹಾಡರ ನಾಲ್ಕು ಮಠಗಳಲ್ಲಿ ಕೊಂಗೂರು ಮಠವನ್ನು ಸೇರಿಸಿದ್ದರೂ, ಅದು ಈಗಲೂ ಪ್ರತ್ಯೇಕವಾಗಿಯೇ ಉಳಿದಿದೆ.

ಕರ್ಹಾಡರ ಇಡೀ ಜಾತಿ ಗುರಿಕಾರರಿರುವುದು ಕಾಸರಗೋಡಿನ, ಅಗಲ್ಪಾಡಿ ಸರಹದ್ದಿನಲ್ಲಿ. ಹೆಚ್ಚಾಗಿ ಆಢ್ಯರು, ಶ್ರೀಮಂತರು, ಪ್ರಭುತ್ವ ಸಂಪನ್ನರಾದವರನ್ನು ಗುರುತಿಸಿ, ಗುರಿಕಾರ್ತಿಕೆಯರನ್ನು ಕೊಡುವುದು ಕ್ರಮ. ಕಾರಣ, ಇವರು ಇಡೀ ಜಾತಿ ಸಮೂಹವನ್ನು ನಿಯಂತ್ರಿಸುವಷ್ಟು ಸಾಮರ್ಥ್ಯವಿರುವ ಮನೆತನದವರಾಗಿರಬೇಕು. ಮಠ ಸ್ಥಾಪನೆ ಹಾಗೂ ಜಾತಿಯ ವ್ಯವಸ್ಥಿತಿ ನಿರ್ಮಾಣವಾಗಬೇಕಿದ್ದರೆ ಕಡಿಮೆಯೆಂದರೆ ೫೦ ರಿಂದ ೧೦೦ ವರ್ಷಗಳು ಬೇಕಾಗಬಹುದು. ಹಾಗಾಗಿ ಇಲ್ಲಿಯವರೆಲ್ಲ ಪೋರ್ಚುಗೀಸರ ಗೋವಾ ಆಕ್ರಮಣಕ್ಕಿಂತ ಮೊದಲೇ ಬಂದವರಾಗಿದ್ದು, ಮಂಗಳೂರು ಆ ಕಡೆ ನೆಲೆಸಿದವರು ಆಕ್ರಮಣದ ಅನಂತರ ಬಂದವರೆಂದು ಹೇಳ ಬಹುದು. ಅಗಲ್ಪಾಡಿ ಮಠವೇ ಮೊದಲು ನಿರ್ಮಾಣವಾಗಿದ್ದು, ಮಿಕ್ಕುಳಿದ ಮಠಗಳು ಅನಂತರ ನಿರ್ಮಾಣವಾದವುಗಳು. ಕೊಂಗೂರು ಮಠ ಮೊದಲು ಅಲ್ಲ, ಕೊನೆಯಲ್ಲಿ ನಿರ್ಮಾಣವಾದುದು ಸತ್ಯ. ವಲಸೆ ಬರುವಾಗ ಎಲ್ಲರೂ ಒಟ್ಟಿಗೆ ಬಾರದೆ, ಹಂತ ಹಂತವಾಗಿ ಬಂದಂತೆ ಕಾಣುತ್ತದೆ. ಹಾಗೆ ಬಂದ ಒಟ್ಟು ಕುಟುಂಬಗಳು, ಕಾಸರಗೋಡು ಪುತ್ತೂರುಕ್ ಕಡೆಗಳಲ್ಲಿ ಹೆಚ್ಚು ಕಡಿಮೆ ಐವತ್ತರಿಂದ ಅರುವತ್ತು ಇರಬಹುದು. ಅದರಲ್ಲಿಯೂ ಹದಿನೆಂಟು ಕುಟುಂಬಗಳಲ್ಲಿ ಒಂದೊಂದೇ ಮನೆ ಇರುವುದನ್ನು ಕಾಣುತ್ತೇವೆ. ಮಂಗಳೂರು, ಉಡುಪಿ, ಮೂಡಬಿದಿರೆ ಕಡೆಯಲ್ಲಿ ಸಾಮಾನ್ಯ ಇಪ್ಪತ್ತೊಂದು ಕುಟುಂಬಗಳಿವೆ. ಒಂಭತ್ತು ಕುಟುಂಬಗಳಲ್ಲಿ ಒಂದೊಂದೇ ಮನೆಯಿದೆ.

ತುಳುನಾಡಿಗೆ ಬಂದ ಮೂರನೇ ವಲಸೆ, ಹನ್ನೊಂದನೆಯ ಶತಮಾನದ ಮಧ್ಯ ಕಾಲದಿಂದಾರಂಭವಾಗಿ, ಅಂತ್ಯದ ವರೆಗೆ ಮುಂದುವರಿದಿರಬೇಕೆಂದು ಡಾ। ಪಿ. ಗುರುರಾಜ ಭಟ್ಟರು ಅಭಿಪ್ರಾಯ ಪಡುತ್ತಾರೆ.

ದಿ. ವಾಸುದೇವ ಆಠಲೆಯವರೇ ಮೊದಲಾದವರು ೧೪ನೇ ಶತಮಾನದಲ್ಲಿ ಧರ್ಮ ಸಂಕಟದಿಂದ ಗೋವಾದಿಂದ ವಲಸೆ ಹೋದ ವಿಚಾರ ಹೇಳಿದ್ದಾರೆ. ೧೫ನೇ ಶತಮಾನದಲ್ಲಿ ಬಿಜಾಪುರ ಸುಲ್ತಾನನು ಗೋವೆಯನ್ನು ಆಕ್ರಮಿಸಿದ್ದು, ಆಗ ಹೆಚ್ಚಿನ ವಲಸೆಯಾದದ್ದು ಕಂಡು ಬರುತ್ತದೆ. ಈ ವಿಚಾರವನ್ನು

ಗಮನಿಸಿದಾಗ ಕಾಸರಗೋಡು, ಪುತ್ತೂರು ಮುಂತಾದೆಡೆಗೆ ೧೩-೧೪ ನೇ ಶತಮಾನದಲ್ಲೇ ವಲಸೆ ಬಂದಿರಬೇಕು. ೧೫೧೦ ರಲ್ಲಿ ಪೋರ್ಚುಗೀಸರು ಗೋವಾಕ್ರಮಣ ಮಾಡಿದ ಸಮಯದಲ್ಲಿ ವಲಸೆ ಬಂದವರು, ಮಂಗಳೂರು, ಮೂಡಬಿದಿರೆ, ಉಡುಪಿ, ಕಾರ್ಕಳಗಳಲ್ಲಿ ನೆಲೆಸಿದರೆಂದು ಹೇಳಬಹುದು. ಹೀಗೆ ವಲಸೆ ಬಂದ ಕುಟುಂಬಗಳಲ್ಲಿ ನಾಲ್ಕೈದು ಕುಟುಂಬಗಳು, ಕಾಸರಗೋಡು, ಪುತ್ತೂರಲ್ಲಿ ಮೊದಲು ವಲಸೆ ಬಂದ ಕರ್ಹಾಡ ಬ್ರಾಹ್ಮಣರ ನಡುವೆ ಬಂದು ನೆಲೆಸಿದರು. ಇವರು ಈಗಲೂ ಮರಾಠಿ ಮಾತನಾಡುತ್ತಾರೆ. ಮರಾಠಿ ಮಾತನಾಡುವ ವಲಸಿಗಳು ಒಂದೇ ಕಡೆಯಿಂದ ಬಂದವರಲ್ಲ. ಬೇರೆ ಬೇರೆ ಕಡೆಯಿಂದ ಬಂದವರು. ಇವರು ಹಿಂದೆ ಇದ್ದ ಪ್ರದೇಶದ ಪ್ರಭಾವ ಇವರ ಭಾಷೆಯ ಮೇಲೆ ಬಿದ್ದಿರುವುದರಿಂದ, ಇಲ್ಲಿಯೂ ಭಾಷಾ ವ್ಯತ್ಯಾಸ ಇರಲು ಕಾರಣ. ಮಂಗಳೂರು, ಮೂಡಬಿದಿರೆಯ ಕಡೆಯ ಕರಾಡಿಯರಾಡುವ ಮರಾಠಿ ಪೂನಾ, ಮುಂಬಾಯಿಯ ಮರಾಠಿಯನ್ನು ಹೋಲಲು ಇದೇ ಕಾರಣ. ಇಲ್ಲಿಗೆ ಬಂದ ಮೇಲೆ ನೆಲೆ ನಿಂತ ಪ್ರದೇಶದ ಪ್ರಭಾವ ಬಿದ್ದು, ಭಾಷಾ ಶುದ್ಧತೆ ಕಡಿಮೆಯಾಯಿತು.

ಕೊಂಕಣಿಗರೆಂದೇ ಪ್ರಸಿದ್ಧರಾದ ಗೋವಾದ ಸಾರಸ್ವತರ ಸಾಹಚರ್ಯ ಅತ್ಯಂತ ಹೆಚ್ಚು ಕರ್ಹಾಡರಿಗಿದ್ದಂತೆ ತೋರುತ್ತದೆ. ಕಾಸರಗೋಡು, ಪುತ್ತೂರುಗಳಲ್ಲಿ ಕರ್ಹಾಡಿಯವರು ಈಗ ಮಾತನಾಡುವ ಭಾಷೆ ಮರಾಠಿಯಲ್ಲ. ಕರ್ಹಾಡಿ ಈ ಕರ್ಹಾಡಿಗೂ ಕೊಂಕಣಿಗೂ ಅತ್ಯಂತ ನಿಕಟವಾದ ಸಾಮ್ಯ ಕಂಡುಬರುತ್ತದೆ. ವೇಷ ಭೂಷಣಗಳಲ್ಲಿಯೂ ವ್ಯತ್ಯಾಸವಿಲ್ಲ. ಕಚ್ಚೆ ಹಾಕಿ ಸೀರೆ ಉಡುವುದು ಹಣೆಯಲ್ಲಿ ಕುಂಕುಮದ ಅಡ್ಡನಾಮ, ಕಿವಿಯ ಆಭರಣಗಳು, ಇವೇ ಮೊದಲಾದವುಗಳಲ್ಲಿ ಕರ್ಹಾಡಿ ಮಹಿಳೆಯರಿಗೂ, ಸಾರಸ್ವತ ಮಹಿಳೆಯರಿಗೂ ವ್ಯತ್ಯಾಸವಿಲ್ಲ. ಕರ್ಹಾಡ ಬ್ರಾಹ್ಮಣರಲ್ಲಿರುವ ಅಡ್ಡ ಹೆಸರುಗಳಲ್ಲಿ ಸಾಮಾನ್ಯ ೬೦ ಅಡ್ಡ ಹೆಸರುಗಳು ಸಾರಸ್ವತರಲ್ಲಿಯೂ ಇವೆ.

### ೩.೬. ಕರಾಡಿ/ಕರ್ಹಾಡಿ – ಸ್ವತಂತ್ರ ಭಾಷೆ

ಕರಾಡ ಭಾಷೆ ಯಾವುದೆನ್ನುವುದರ ಬಗ್ಗೆ ಜಿಜ್ಞಾಸೆ ನಡೆಯುತ್ತಾ ಬಂದಿದೆ. ಕರ್ಹಾಡ ವರ್ಗಕ್ಕೆ ಸೇರಿದ ಇವರ ಭಾಷೆ ಕರ್ಹಾಡಿ ಎಂಬ ಭಾಷೆಯೇ ಆಗಿದೆ. ಇದು ಮರಾಠಿ ಅಥವಾ ಕೊಂಕಣಿಯ ಪ್ರಭೇದವೆಂದೂ, ಮರಾಠಿಯ ಉಪಭಾಷೆಯಾ ಅಪಭ್ರಂಶವೆಂದೂಹೇಳಿದ ವಿದ್ವಾಂಸರನೇಕರು, ತತ್ವನಿಷ್ಠವಾಗಿ ಮತ್ತು ವಸ್ತು ನಿಷ್ಠವಾಗಿ, ಸಂಶೋಧನಾಧ್ಯಯನ ನಡೆಸದೆ ಇರುವುದೇ ಇದಕ್ಕೆ ಕಾರಣ. ಆದರೆ ಜಪಾನಿನ ಶ್ರೀ ನೋರ್ಹೋಮಿ ಕೊಡಮ ಎಂಬವನು ಇಲ್ಲಿಗೆ ಬಂದು, ಮೂರು ನಾಲ್ಕು ವರ್ಷ ಕರ್ಹಾಡಿಯನ್ನು ಅಭ್ಯಸಿಸಿ, ಕಾಸರಗೋಡು ಕರ್ಹಾಡಿಯ ಬಗ್ಗೆ ತೌಲನಿಕ ಅಧ್ಯಯನ ಸಂಶೋಧನ ನಡೆಸಿ, ತಮ್ಮ ಪಿ.ಎಚ್.ಡಿ. ಗಾಗಿ ಸಿದ್ಧ ಪಡಿಸಿದ "Sructural Boorowing from Dravidian – The case of Kasaragod Karhadi and Few other community Languages in South India" ಪ್ರಬಂಧದಲ್ಲಿ ಭಾಷಾಸಾಕ್ಷ್ಯಾಧಾರಗಳ ಪ್ರಕಾರ ಕಾಸರಗೋಡಿನ ಕರ್ಹಾಡರು, ಕೊಂಕಣದ ಯಾವುದೋ ಭಾಗದಲ್ಲಿ ಭಾಷಾಗತಿಯನ್ನು ಪ್ರಾರಂಭಿಸಿರುವುದು ಕಂಡು ಬರುತ್ತದೆ. ಈ ಭಾಷೆಯನ್ನು ಆಡುವವರ ನಂಬಿಕೆಗೆ ವಿರುದ್ಧವಾಗಿ ಹೇಳುವುದಾದರೆ, ಕಾಸರಗೋಡಿನ ಕರ್ಹಾಡಿ ಕೊಂಕಣಿಯ ಆಡು ಭಾಷೆಯಾಗಿರುವುದೇ ಹೆಚ್ಚು. ಮರಾಠಿ ಅಲ್ಲ. ಕಾಸರಗೋಡು ಕರ್ಹಾಡಿ, ಕೊಂಕಣಿಯ ಆಡು ಭಾಷೆಯಿಂದ, ಸಂವಹನ ಕ್ರಮದಿಂದ ರೂಪಿತವಾಯಿತು.

ಕರ್ಹಾಡ ಬ್ರಾಹ್ಮಣರ ಮಾತೃ ಭಾಷೆ ಮರಾಠಿಯಾಗಿದ್ದರೂ, ಮೊತ್ತ ಮೊದಲು ವಲಸೆ ಬಂದು, ಕಾಸರಗೋಡು, ಪುತ್ತೂರು, ಸುಳ್ಯ, ಬೆಳ್ತಂಗಡಿ ಬಂಟ್ವಾಳ ತಾಲೂಕು ಗಳಲ್ಲಿ ನೆಲಸಿದ ಕರ್ಹಾಡಿಯರು ಮಾತನಾಡುವ ಭಾಷೆ ಮರಾಠಿ ಭಿನ್ನವಾಗಿದ್ದು. ಇದೀಗ ಕರ್ಹಾಡಿ ಯಾ ಕರಾಡಿ ಎಂದು ಕರೆಯಲ್ಪಟ್ಟಿದೆ. ಅನಂತರ ವಲಸೆ ಬಂದವರು ಮತ್ತು ಗೋವಾ, ಸಾವಂತವಾಡಿ, ಸಿಂಧು ದುರ್ಗ, ರತ್ನಗಿರಿ ಮೊದಲಾದೆಡೆಗಳಲ್ಲಿರುವ ಕರ್ಹಾಡ ಬ್ರಾಹ್ಮಣರು ಈಗಲೂ ಮರಾಠಿ ಮಾತನಾಡುತ್ತಾರೆ. 'ಜನ ಅಥವಾ ಪ್ರದೇಶದಿಂದಲೇ ಭಾಷೆಗೆ ಹೆಸರು ಪ್ರಾಪ್ತವಾಗುವುದು'' ಎನ್ನುವ ಶಂ. ಬಾ. ಜೋಶಿಯವರ ಮಾತನ್ನು ಗಮನಿಸುವಾಗ ''ಕರಾಡಿ'' ಎನ್ನುವುದು ಜನದಿಂದಲೇ ಹೆಸರು ಬಂತೆನ್ನುವುದು ನಿಶ್ಚಯ. ಮಿಸ್ಟರ್ ರೀವ್ ಎನ್ನುವವರು 1858 ರಲ್ಲಿ ಬರೆದ ಕನ್ನಡ ಮತ್ತು ಇಂಗ್ಲಿಷ್ ಎನ್ನುವ ನಿಘಂಟಿನಲ್ಲಿ ಕರ್ಹಾಡ (Karada (ಕರಾಳ) ಎನ್ನುವುದು ದೇಶದ ಹೆಸರು. ಕರ್ಹಾಡದಲ್ಲಿರುವವರು ಕರ್ಹಾಡರು. ಅಂದರೆ ಮರಾಠರು, ಕೊಂಕಣರು, ತೌಳವರು, ಕನ್ನಡಿಗರು ಎಂದಂತೆ. ಕರಾಡರು ಎನ್ನುವುದಕ್ಕೆ ಕರಾಡ ಬ್ರಾಹ್ಮಣರು ಎನ್ನುವ ಅರ್ಥ ಬರುವುದೇ ಇಲ್ಲ. 'ಕರಾಡಿ' ಎನ್ನುವ ಶಬ್ದಕ್ಕೆ ಎಲ್ಲಾ ನಿಘಂಟುಗಳಲ್ಲಿ ಕರ್ಹಾಡ ದೇಶದ ಬ್ರಾಹ್ಮಣರು ಎಂದು ಸ್ಪಷ್ಟವಾಗಿ ಹೇಳಿದುದರಿಂದ ''ಕರ್ಹಾಡ ಬ್ರಾಹ್ಮಣರು'' ಅಥವಾ ''ಕರಾಡಿ''ಯರು ಎಂದು ಹೇಳುವುದೇ ಯುಕ್ತವಾಗಿದೆ. ಬೇರೆ ಭಾಷಿಗರೂ ಕರ್ಹಾಡ ಬ್ರಾಹ್ಮಣರನ್ನು ''ಕರಾಡಿ'' ಎಂದು ಗುರುತಿಸುತ್ತಿರುವುದು ಸಮಂಜಸವೇ ಆಗಿದೆ. ಆದ್ದರಿಂದ ಕರಾಡಿಯರ ಭಾಷೆ ಕರಾಡಿ ಎನ್ನುವುದು ಸ್ವತಸ್ಸಿದ್ಧವಾದ ಪದವೆನ್ನುವುದರಲ್ಲಿ ಅನುಮಾನವಿಲ್ಲ.

''ಕರಾಡಿಯು ಮರಾಠಿ ಭಿನ್ನವೆಂದು ಹೇಳಬಹುದು. ಕೊಂಕಣಿಗೆ ಇದು ಹತ್ತಿರ, ಉಪಭಾಷೆಯೆಂದು ಒಪ್ಪಿಕೊಳ್ಳಬಹುದು. ಅನ್ಯದೇಶೀಯರೊಬ್ಬರು ನಮ್ಮಲ್ಲಿಗೆ ಬಂದು, ಸಂಶೋಧನೆ ನಡೆಸಿ ಕರ್ಹಾಡಿಗೂ ಮರಾಠಿಗೂ ಸಂಬಂಧವಿಲ್ಲವೆಂದು ಸಾಧಿಸಿದ್ದಾರೆ.

ಗೋವಾ ಮೂಲದ ಎ.ಕೆ. ಪ್ರಿಯೋಳ್ಕರರು ಮುಂಬೈಯಲ್ಲಿ ಹುಟ್ಟಿ ಬೆಳೆದವರು. ಕೊಂಕಣಿ ಮರಾಠಿಯ ಉಪಭಾಷೆಯೆಂದೊ, ಗೋವಾವನ್ನು ಮಹಾರಾಷ್ಟ್ರಕ್ಕೆ ಸೇರಿಸಬೇಕೆಂದು ಹೇಳುವರು. ಇವರ ಶಿಷ್ಯೆ ರಾಜಾದೇವಿ ತಮಿಳರು. ಕೊಂಕಣಿಯು ಮರಾಠಿಯ ಉಪಭಾಷೆಯಲ್ಲ ಎಂದು ಸಾಧಿಸಿ, ಇವರು ಕೊಟ್ಟ ವರದಿಯ ಆಧಾರದ ಮೇರೆಗೆ ಕೊಂಕಣಿ ಭಾಷೆಗೆ ಸಂವಿಧಾನದ ಎಂಟನೇ ಪರಿಚ್ಛೇದದಲ್ಲಿ ಸ್ಥಾನ ಸಿಕ್ಕಿತು. ಸ್ವತಂತ್ರ ಭಾಷೆಯೊಂದನ್ನು ಉಪಭಾಷೆಯೆಂದರೆ ಏನಾಗುತ್ತದೆ ಎನ್ನುವುದನ್ನು ಇದರಿಂದ ತಿಳಿಯಬಹುದು.

ಸಂಸ್ಕೃತ, ಪ್ರಾಕೃತ ಮೂಲವಾದ ಕರಾಡಿ ಭಾಷೆಯು ಸ್ವತಂತ್ರ ಭಾಷೆಯಾಗಿದ್ದು, ಮರಾಠಿಗೂ ಇದಕ್ಕೂ ಸಂಬಂಧವಿಲ್ಲದಿರುವುದು ವಿಶೇಷವಾಗಿದೆ. ಹಿಂದಿ ಮತ್ತು ಕೊಂಕಣಿಯ ಪ್ರಭಾವ ಇದರ ಮೇಲೆ ಬಿದ್ದಿರುವುದು ಕಂಡು ಬರುತ್ತದೆ. ಮರಾಠಿ, ಕೊಂಕಣಿ ಭಿನ್ನವಾಗಿ ಇದು ಹೇಗೆ ಸ್ವತಂತ್ರವಾಗಿದೆ ಹಾಗೂ ಈ ಭಾಷೆಯ ವೈಶಿಷ್ಟ್ಯವೇನು ಎನ್ನುವುದನ್ನು ಭಾಷಾ ಶಾಸ್ತ್ರದ ಆಧಾರದ ಮೇಲೆ ಸೂಕ್ಷ್ಮವಾಗಿ ವಿವೇಚಿಸಿದೆ.

ಮನುಷ್ಯನ ಜೀವನ ನಿರ್ವಹಣೆ ಬದಲಾಗುತ್ತಾ ಹೋದಂತೆ ಭಾಷೆಯೂ ಪರಿವರ್ತಿತವಾಗುತ್ತದೆ. ಆದರೆ ಈ ಬದಲಾವಣೆ ಬಹಳಷ್ಟು ನಿಧಾನವಾಗಿ ಆಗುತ್ತದೆ. ಇಂತಹ ಬದಲಾವಣೆಯಿಂದಲೇ ವ್ಯವಹಾರಿಕ, ಪ್ರಾಂತೀಯ ಭಾಷೆಗಳು, ಹುಟ್ಟಿಕೊಂಡವು. ಕರಾಡಿಯೂ ಹೀಗೆಯೇ ಹುಟ್ಟಿರಬೇಕು. ಕರ್ಹಾಡಿ ಭಾಷಿಕರಾದ

ಕರ್ಹಾಡ ಬ್ರಾಹ್ಮಣರು ವಲಸೆ ಬಂದರೂ ಕಾಸರಗೋಡು, ಪುತ್ತೂರು, ಸುಳ್ಯ, ಬೆಳ್ತಂಗಡಿ, ಬಂಟ್ವಾಳ ತಾಲೂಕುಗಳಲ್ಲಿರುವ ಕರ್ಹಾಡಿಯರು ಭಾಷೆಯನ್ನು ಉಳಿಸಿಕೊಂಡಿದ್ದಾರೆ.

"ಯಾವುದೇ ಒಂದು ವರ್ಗದಲ್ಲಿ ಸೇರಿರುವ ಹಲವು ಭಾಷೆಗಳಲ್ಲಿ ಮೂಲ ಅಥವಾ ಪ್ರಾಚೀನ ಭಾಷೆ ಯಾವುದು ಮತ್ತು ಒಂದು ಭಾಷೆಗೆ ಅತ್ಯಂತ ನಿಕಟವಾದ ಬೇರೆ ಇನ್ನೊಂದು ಭಾಷೆ ಯಾವುದೆಂದು ಕಂಡು ಹಿಡಿಯುವಲ್ಲಿ, ಶಬ್ದಗಳ ಶುದ್ಧ ರೂಪ ಸರ್ವನಾಮಗಳು, ಸಂಖ್ಯಾ ವಾಚಕಗಳು, ಸಂಬಂಧಿಕರ ಹೆಸರುಗಳು, ದೈನಂದಿನ ಉಪಯೋಗಿಸುವ ವಸ್ತುಗಳ ಹೆಸರುಗಳು, ಅಖ್ಯಾತರೂಪಗಳು ಮತ್ತು ವಿಭಕ್ತಿ ರೂಪಗಳು ಮುಖ್ಯ ಸಾಧನಗಳಾಗಿರುತ್ತವೆ. ಅವುಗಳಲ್ಲಿ ಬಳಸಲ್ಪಡುವ ಶಬ್ದಗಳು ಸಂಸ್ಕೃತ ಭಾಷೆಗೆ ಆ ಪ್ರಮಾಣದಲ್ಲಿ ಅವು ಪ್ರಾಚೀನವಾದವುಗಳೆಂದು ಸಿದ್ಧವಾಗುತ್ತವೆ". ಹಾಗಾಗಿ ಅನ್ಯಾನ್ಯ ಕೆಲವು ಭಾಷಾ ಶಬ್ದಗಳನ್ನು ನೋಡಬಹುದು.

ದೇಹದ ಅಂಗಾಂಗಗಳು:

೧) ಉಂಗಳಿ (ಕರಾಡಿ) ಅಂಗುಲಿ (ಸಂಸ್ಕೃತ) ಅಂಗುಲೀ (ಪ್ರಾಕೃತ) ಬೋಟ (ಕೊಂಕಣಿ) ಬೋಟ (ಮರಾಠಿ)

೨) ಹೂರು (ಕರಾಡಿ) ಉರಸ್ (ಸಂ) ಹಿಯಯ(ಪ್ರಾಕೃತ) ಅರ್ದೆ(ಕೊಂಕಣಿ) ಛಾತೀ (ಮರಾಠಿ)

ಸಂಬಂಧ ವಾಚಕಗಳು:

೧) ಭವು (ಕರಾಡಿ) ಭ್ರಾತೃ (ಸಂಸ್ಕೃತ) ಭಾವ್ (ಕೊಂಕಣಿ) ಭಾವೂ (ಮರಾಠಿ) ತಮ್ಮ (ಕನ್ನಡ)

೨) ಅಪ್ಪ (ಕರಾಡಿ) ಪಿತಾ (ಸಂಸ್ಕೃತ) ಪಿಅ (ಪ್ರಾಕೃತ) ಬಾಪ್ಪುಸು (ಕೊಂಕಣಿ) ಬಾಪೂಸ (ಮರಾಠಿ) ತಂದೆ (ಕನ್ನಡ)

ಸಾಮಾನ್ಯ ಪ್ರಾಣಿಗಳು:

೧) ಕೋಳು (ಕ) ಕೋಲ (ಸಂ) ವರಾಹೊ (ಪ್ರಾ) ರಾನ್‌ಡುಕ್ಕರ್ ಡುಕ್ಕರ್ (ಕೊಂ) ಡುಕ್ಕರ (ಮ) ಕಾಡು ಹಂದಿ (ಕನ್ನಡ)

೨) ಕೊಕ್ಕುಡ (ಕ) ಕುಕ್ಕುಟ: (ಸಂ) ಕೊಂಬೊ, ಕೊಂಬ, ಕುಂಕಡ (ಕೊಂ) ಕೋಂಬಡಾ (ಮ) ಕೋಳಿ (ಕನ್ನಡ)

ಸಾಮಾನ್ಯ ಪದಾರ್ಥಗಳು:

೧) ಲೋಣ (ಕ) ಲವಣಂ (ಸಂ) ಲೋಇ(ಪ್ರಾ) ಮೀಟ್ (ಕೊಂ) ಮೀಾಡ (ಮ) ಉಪ್ಪು (ಕನ್ನಡ)

೨) ಸತ್ರಂ (ಕ) ಛತ್ರಂ (ಸಂ) ಸತ್ರೆ (ಕೊಂ) ಛತ್ರೀ (ಮ) ಕೊಡೆ (ಕನ್ನಡ)

ಸರ್ವನಾಮಗಳು:

೧) ಹಾವಂ (ಕ) ಅಹಮ್ (ಸಂ) ಹಂ (ಪ್ರಾ) ಆವಂ ; ಹಾವಂ, ಹಾಂವ (ಕೊಂ) ಮೀ(ಮ) ನಾನು (ಕನ್ನಡ)

೨) ಮಜ್ಝೋ (ಕ) ಅಸ್ಮತ್( ಸಂ) ಮಜಝು(ಪ್ರಾ) ಮಿಗಲೆ, ಮಜ್ಜೆ (ಕೊಂಕಣಿ) ಮಾಝು(ಮ) ನನ್ನ (ಕನ್ನಡ).

ಸಂಖ್ಯಾ ವಾಚಕ:

೧) ದೋನಿ (ಕ) ದ್ವೌ (ಸಂ) ದುವೆ, ದೋಣಿ (ಪ್ರಾ) ದೋನಿ (ಕೊಂ) ದೋನ (ಮ) ಎರಡು (ಕನ್ನಡ

೨) ಶೆಹೆಂ (ಕ) ಶತಂ (ಸಂ) ಶಂ (ಪ್ರಾ) ಶೆಂ, ಶೆಂಬರ್ (ಕೊಂ) ಶಂಭರ (ಮ) ನೂರು (ಕನ್ನಡ)

ಧಾತುರೂಪಗಳು:

೧) ಪಳೆ (ಕ) ಪ್ರಲೋಕಯ (ಸಂ) ಪಲೋಎಸು (ಪ್ರಾ) ಪಳೆ (ಕೊಂ) ವಘ (ಮ) ನೋಡು (ಕನ್ನಡ).

ನಾಮಪದಗಳು:

೧) ರೂಖು (ಕ) ವೃಕ್ಷ : (ಸಂ) ರುಕ್ಖೋ(ಪ್ರಾ) ರೂಕು (ಕೊಂ) ಝಾಡ್‌ಝಾಡೀ (ಮ) ಮರ (ಕನ್ನಡ)

೨) ತಂದುಳು (ಕ) ತಂಡುಲ: (ಸಂ) ತಂದುಲ್, ತಂದುಲು (ಕೊಂ) ತಾಂದೂಳ (ಮ) ಅಕ್ಕಿ (ಕನ್ನಡ).

ಪುರೋಹಿತ, ಪೌರೋಹಿತ್ಯ ಎನ್ನುವುದಕ್ಕೆ ಕರಾಡಿಯಲ್ಲಿ ಉಪಾಧ್ಯೋ ಉಪಾಧ್ಯಪಣ, ಕೊಂಕಣಿಯಲ್ಲಿ ಭಟ್ಟು, ಭಟ್ಟಣ, ಅರ್ಚಕು, ಅರ್ಚಕತನ, ಪುರೋಹಿತು, ವೈದಿಕು, ಮರಾಠಿಯಲ್ಲಿ ಭಟ್, ಭಟ್‌ಪಣ, ಭಿಕ್ಷುಕಿ ಎನ್ನುತ್ತಾರೆ. ಉಪಾಧ್ಯ, ಭಟ್ಟ, ಪುರೋಹಿತ, ಅರ್ಚಕ, ವೈದಿಕ ಎನ್ನುವ ಶಬ್ದಗಳೆಲ್ಲಾ ಸಂಸ್ಕೃತವಾಗಿದ್ದರೂ ಬೇರೆ ಬೇರೆಯಾಗಿದ್ದು ಕರಾಡಿಯಲಿ ವಿಶೇಷಶಬ್ದ ಪ್ರಯೋಗ ಮಾಡಲಾಗಿದೆ.

ಪ್ರಾಕೃತ ಪ್ರಭೇದಗಳು ಇಪ್ಪತ್ತೇಳೆಂದು ಹೇಳಲ್ಪಟ್ಟ ಕೆಲವೇ ಪ್ರಾಕೃತ ಭಾಷೆಗಳಿಗೆ ವ್ಯಾಕರಣ ನಿರ್ಮಾಣ ಮಾಡಲಾಗಿದೆ. ಆದರೆ ಈ ಪ್ರಾಕೃತ ಪ್ರಭೇದಗಳು ಈಗ ಅರುವತ್ತೋ, ಅರುವತ್ತೈದೋ, ಇರಬಹುದು. ಹಾಗಾಗಿ ಹದಿನಾಲ್ಕೋ ಹದಿನೈದೋ ಸಾವಿರ ಜನ, ಮಾತಾಡುವ ಸ್ವತಂತ್ರ ಕರಾಡಿ ಭಾಷೆ ಇರುವುದು ಆಶ್ಚರ್ಯ ಜನಕವಲ್ಲ.

ಕರಾಡಿ, ಕೊಂಕಣಿ, ಮರಾಠಿ ಇವೆಲ್ಲ ಸಹೋದರಿ ಭಾಷೆಗಳು ಇವುಗಳ ಆಕಾರ, ರೂಪ, ಧ್ವನಿಗಳಲ್ಲಿ ವ್ಯತ್ಯಾಸ ಕಡಿಮೆ. ಹತ್ತಿರದ ಸಂಬಂಧವಿದೆ. ಅದೋ ಇದೋ, ಹಾಗೆಯೋ ಹೀಗೆಯೋ, ಎನ್ನುವ ಭ್ರಮೆ ಹುಟ್ಟಿಸುತ್ತದೆ. ಆದರೆ ಇವು ಒಂದೇ ಅಲ್ಲ. ಸಾಕಷ್ಟು ಭೇದವೂ ಇದೆ. ಉಚ್ಚರಿಸುವಾಗ, ಬರೆಯುವಾಗ ಕರಾಡಿ ಯಾವುದು. ಕೊಂಕಣಿ ಯಾವುದು, ಮರಾಠಿ ಯಾವುದು ಎಂದು ಗೊತ್ತಾಗದೆ ಹೋದರೆ, ಕರ್ಹಾಡಿಯ ಅಸ್ತಿತ್ವಕ್ಕೆ ಧಕ್ಕೆ ಬರಬಹುದು.

ಪ್ರತಿಯೊಂದು ಭಾಷೆಯು ಹುಟ್ಟಿಗೆ ಬೆಳವಣಿಗೆಗೆ ಒಂದಲ್ಲ ಒಂದು ರೀತಿಯ ಶಾಸ್ತ್ರೀಯ ಆಧಾರವಿರುತ್ತದೆ. ವ್ಯವಹಾರಿಕವಾದ ಭಾಷೆ ಕೇವಲ ಉಚ್ಚಾರಾಧಾರಿತವಾಗಿದ್ದು, ಅದು ಹೇಳುವವನ, ದೋಷ ಯಾ ದೌರ್ಬಲ್ಯದಿಂದ ವ್ಯತ್ಯಾಸವಾಗುತ್ತದೆ. ಹೇಳುವವನು ಏನು ಹೇಳಿದ, ಕೇಳುವವನು ಏನು ಕೇಳಿದ ಎನ್ನುವ ವಿಮರ್ಶೆ ಇಲ್ಲಿರುವುದಿಲ್ಲ. ಒಟ್ಟಾರೆ ಇದು ಬೆಳೆಯುತ್ತದೆ ಆದರೆ ಹೇಳುವವರು, ಕೇಳುವವರು ಬುದ್ಧಿವಂತರಾದರೆ, ಭಾಷಾ ಶುದ್ಧಿಯ ಕಡೆಗೆ ಗಮನ ಕೊಡುತ್ತಾರೆ. ಕೆಲವೊಮ್ಮೆ ಬುದ್ಧಿವಂತರೂ ಭಾಷಾ ಮೂಲದ ಬಗ್ಗೆ ವಿಮರ್ಶಿಸದೆ, ತಾವು ಹೇಳಿದ್ದೇ ಸರಿಯೆಂದು ಗ್ರಹಿಸಿ ಹೇಳುತ್ತಾರೆ. ಸಾಹಿತ್ಯಕವಾಗಿ ಬರೆಯುತ್ತಾರೆ. ಆಗ ಭಾಷೆ ಕುಲಗೆಡುತ್ತದೆ ಕರ್ಹಾಡಿಯ ಅವಸ್ಥೆಯೂ ಇದೇ ಆಗಿದೆ.

ಕರಾಡಿಯು ಸಂಸ್ಕೃತ ವರ್ಣಮಾಲೆಯನ್ನು ಅನುಸರಿಸುತ್ತಿದ್ದು, ಒಟ್ಟು 49 ಅಕ್ಷರಗಳಿವೆ. ಆದರೆ ಈಗ ಬಳಕೆಯಲ್ಲಿಲ್ಲದ ಸಂಸ್ಕೃತದ ಋೂ ಲೃ. ಲೄ ಉಪಧ್ಮಾನೀಯ, ಜಿಹ್ವಾಮೂಲೀಯವನ್ನು ಬಿಟ್ಟಿದೆ. ಪ್ರಾಕೃತದ ಎ. ಒ.ಗಳನ್ನು ತೆಗೆದುಕೊಂಡಿದೆ. ಕೊಂಕಣಿಯಲ್ಲಿ 51 ಅಕ್ಷರಗಳಿವೆ. ಮರಾಠಿಯಲ್ಲಿ 48 ಅಕ್ಷರಗಳಿವೆ. ಎ.ಒಗಳಿಲ್ಲ ಉಚ್ಚಾರವಿದೆ.

ಕರಾಡಿಯಲ್ಲಿ ವಿಸರ್ಗವಿದ್ದುದು ಈಗ ಬಿಟ್ಟು ಹೋಗಿದೆ. ಧಿಃಕ್ಕಾರು ವಃಜ್ಜಪ, ಸಿಃಜ್ಜರ, ಉಃಜ್ಜೊ ಕಃಶ್ಶಿ, ನಃಯಾಕ ಇತ್ಯಾದಿ. ವಿಸರ್ಗದ ಬದಲಿಗೆ ಹಕಾರ ಉಪಯೋಗಿಸಲ್ಪಡುತ್ತದೆ. ನ್ಹಾರ, ವ್ಹಾಣಿ ಮ್ಹಾತು, ಪುನ್ಹವ, ಇತ್ಯಾದಿ ವಿಸರ್ಗವು ಹಕಾರವಾಗಿ ಉಚ್ಚರಿಸಲ್ಪಡುವುದೇ ಇದಕ್ಕೆ ಕಾರಣ ಅಲ್ಲದೆ ಹಕಾರ ವಿಸರ್ಗಗಳ ಉಚ್ಚಾರ ಸ್ಥಾನವೂ ಒಂದೇ ಆಗಿದೆ. ಕರಾಡಿಗೆ ವಿಸರ್ಗಬೇಕಾಗಿದೆ. ಉಚ್ಚಾರಣ ದೃಷ್ಟಿಯಿಂದ ಈಗಲೂ ಉಪಯೋಗಿಸುವುದು ಸೂಕ್ತ.

ಕರಾಡಿಯಲ್ಲಿ ಅನುಸ್ವಾರಕ್ಕೆ ಹೆಚ್ಚು ಪ್ರಾಶಸ್ತ್ಯವಿದೆ. ಪೇಟ (ಪೆಟ್ಟಿಗೆ) ಪೇಂಟ (ಪೇಟೆ) ಕಾಟಿ (ಕಾಡುಕೋಣ) ಕಾಂಟಿ (ಗಾಟಿಗೆ) ಪಾಲಂದಯಾ (ಬೆಳಿಗ್ಗೆ) ಪಾಲದಯಾ (ಪಾಲಾಗಲು) ಪೋರು (ಹುಡುಗ) ಪೋರುಂ (ಕಳೆದ ವರ್ಷ) ಇತ್ಯಾದಿ.

ಅನುಸ್ವಾರವನ್ನು ಹೋಲುವ ಇನ್ನೊಂದು ಚಿಹ್ನೆ ಚಂದ್ರಬಿಂದು (ँ) ಸಂ–ಪುಸ್ಕೋಕಿಲ: ಪುಂಸ್ಕೋಕಿಲ: ಚಂಕ್ರಿಂಸ್ಮಾಯಸ್ವ. ಅನುಸ್ವಾರದಂತೆ ಚಂದ್ರ ಬಿಂದುವಿನ ಗಣನೆ ವರ್ಣಮಾಲೆಯಲ್ಲಿಲ್ಲ. ಆದರೆ ಕರಾಡಿಗಿದು ಅಗತ್ಯ. ಘೋಡಾಕ, ಘೊಡಾನ, ಸಾಗ, ಸೋಣಾಕ, ಹಾಕಾರು, ಕಬೆಂ, ಇತ್ಯಾದಿ.

ಕರಾಡಿಯಲ್ಲಿ ಉಚ್ಚಾರದ ವ್ಯತ್ಯಾಸದಿಂದ ಅರ್ಥವ್ಯತ್ಯಾಸವಾಗುತ್ತದೆ. ಕಡ್ರ (ಕಂಠ) ತೆಗೆಯು ಕಡ್ರ (ದಂತ ಮೂಲ) ತೆಗೆಯು. ಖಂಡ್ರ (ಕಂಠ) ಕಡಿ. ಖಂಡ್ರ (ದಂತಮೂಲ) ಅಗೆಯು ನತ್ತು (ದಂತ) ಮೊಮ್ಮಗ ನತ್ತು (ತಾಲು) ಮೂಗುತಿ ಪಂತಿ (ಓಷ್ಠ) ಜಡೆ. ಪಂತಿ (ದಂತ) ಸಾಲು ತಳಾಕ (ದಂತ) ತುದಿಗೆ. ತಳಾಕ (ದಂತ ಮೂಲ) ಕೆರೆಗೆ ಇತ್ಯಾದಿ

ಅನ್ಯಭಾಷೆಯ ಶಬ್ದಗಳನ್ನು ಸೇರಿಸುವಾಗ ಹಾಗೆಯೇ ಸೇರಿಸದೆ, ಅವುಗಳಿಗೆ ಕರಾಡಿಯ ಟೊಪ್ಪಿಯನ್ನೋ ಅಂಗಿಯನ್ನೋ, ಹಾಕಿ ಸಜಾತಿಕರಿಸಿರುತ್ತದೆ.

ಶಿರೋವೇದನಾ (ಸಂ) ಮತ್ಥಾವೆತ್ಥ (ಕರಾಡಿ) ತಲೆ ನೋವು. ಅಗ್ನಿ ಪೇಟಿಕಾ (ಸಂ) ಉಜ್ಜಾಪೇಟ (ಕರಾಡಿ) ಬೆಂಕಿ ಪೆಟ್ಟಿಗೆ. ಉದರ ವೇದನಾ (ಸಂ) ಪೊಟ್ಟಾವೆತ್ಥ (ಕರಾಡಿ) ಹೊಟ್ಟೆನೋವು. ಉದಭಾಂತಂ (ಸಂ) ಉದ್ಕಾಭಾಣ (ಕರಾಡಿ) ನೀರ ಪಾತ್ರೆ. ನೇತ್ರಾಂಬು (ಸಂ) ದೋಳಾಉದೊ (ಕರ) ಕಣ್ಣೀರು ಇತ್ಯಾದಿ. ಸಾಮಾನ್ಯವಾಗಿ ಮಗ, ಮಗಳು, ಗಂಡು ಹೆಣ್ಣು, ಗಂಡ, ಹೆಂಡತಿ, ಗಂಡಸು, ಹೆಂಗಸು, ಮುಂತಾದ ಶಬ್ದಗಳಿಲ್ಲದೆ, ಒಂದು ಸ್ವತಂತ್ರ ಭಾಷೆ ಹುಟ್ಟುವುದಿಲ್ಲ. ಅಂದರೆ ಆಶಬ್ದಗಳು ಆ ಭಾಷೆಯ ಜೀವಾಳವಾಗಿರುತ್ತವೆ. ಮತ್ತು ಭಾಷೆಯಲ್ಲಿ ಬಳಸಲಾಗುವ ಅಂಥ ಶಬ್ದಗಳ ಮೇಲಿಂದ ಭಾಷೆಯ ಮೂಲವನ್ನು ಮತ್ತು ಇತಿಹಾಸವನ್ನು ಕಂಡು ಹುಡುಕಲಾಗುತ್ತದೆ.

| ಕರ್ಾಡಿಯಲ್ಲಿ | ಕೊಂಕಣಿಯಲ್ಲಿ | ಮರಾಠಿಯಲ್ಲಿ |
|---|---|---|
| ಮಗ–ಪುತ್ರ: (ಸಂ) ಪೂತು | ಮಗ– ಪುತ್ರಕ : (ಸಂ) ಬುರಗೋ | ಮಗ–ಮುಲಗಾ |
| ಮಗಳು–ದುಹಿತಾ (ಸಂ) ಧುವ | ಮಗಳು–ದುಹಿತಾ (ಸಂ) ಧೂವ | ಮಗಳು–ಮುಲಗೀಂ |
| ಮಗು–ಚೇಡ(ಸಂ)ಚೆಡ್ಡುಂ | ಮಗು–ಅರ್ಭಕ: (ಸಂ)ಬುರಗೇಂ, ಭುರಗೇಂ | ವಂಗು–ಮುಲಕಾ |
| ಗಂಡ–ಬ್ರಾಹ್ಮಣ (ಸಂ)ಬಮ್ಮಣು | ಗಂಡ – ಬ್ರಾಹ್ಮಣ: (ಸಂ) ಬಾಮ್ಹಾಣ್ | ಗಂಡ–ಪತಿ (ಸಂ)ಪತಿ |
| ಹೆಂಡತಿ–ಭಾರ್ಯಾ (ಸಂ) ಬಯಿಲ | ಹೆಂಡತಿ– ಭಾರ್ಯಾ(ಸಂ) ಬಾಇಲ | ಹೆಂಡತಿ–ಸ್ತ್ರೀ ಬಾಯಕೋ |
| ತಾಯಿ–ಅಂಬಾ(ಸಂ) ಅಮ್ಮ, ಅವಯಿ | ತಾಯಿ–ಮಾತಾ(ಸಂ) ಮಾಯ್ (ತಾಯಿಗಾಗಿ ಮಾತ್ರ) | ತಾಯಿ–ಬಾಈ, ಆಯಿಾ |
| ತಂದೆ–ವಪ್ಪಾ(ಸಂ) ಅಪ್ಪ | ತಂದೆ–ವಪ್ಪಾ(ಸಂ) ಬಾಪ್, ಬಾಬ್ | ತಂದೆ–ಬಾಬಾ, ವಡಿಲ |
| ಗಂಡಸು – ದಾದುಲೊ | ಗಂಡಸು – ದಾದಲೊ, ದಾರಲೊ | ಗಂಡಸು–ತುರುಷ |
| ಹೆಂಗಸು–ಮಹಿಲಾ (ಸಂ) ಮೇಳುಸ | ಹೆಂಗಸು–ಬಾಇಲ,ಬಾಯ್,ಬಾಯೇ ಅಮ್ಮ | ಹೆಂಗಸು–ಮಹಿಲಾ |
| ಹುಡುಗ–ಚೇಡ(ಸಂ)ಚೇಡು | ಹುಡುಗ–ಚರಕೋ, ಚೆಲೋ | ಹುಡುಗ–ಮುಲಗಾ |
| ಹುಡುಗಿ–ಚೇಡಿ(ಸಂ) ಚೇಡಿ | ಹುಡುಗಿ – ಚೆಲೇ | ಹುಡುಗಿ–ಮುಲಗೀ |

ಮೇಲಿನ ಶಬ್ದಗಳನ್ನು ಗಮನಿಸಿದರೆ, ಕರಾಡಿ ಮತ್ತು ಮರಾಠಿಗೆ ಯಾವುದೇ ಸಂಬಂಧ ಕಾಣಿಸುವುದಿಲ್ಲ. ಕರಾಡಿಯಲ್ಲಿ ಮತ್ತು ಕೊಂಕಣಿಯಲ್ಲಿ ಸಮಾನವಾದ ನಾಲ್ಕು ಸಾಂಸ್ಕೃತ ಶಬ್ದಗಳಿದ್ದರೂ, ಅಪಭ್ರಂಶಗೊಂಡಾಗ ಬೇರೆಯೇ ರೂಪವಾದುದನ್ನು ಗಮನಿಸಬಹುದು. ಕರಾಡಿಯ ಶಬ್ದಗಳು ಸಂಸ್ಕೃತದಿಂದ ಸರಿಯಾಗಿ

ತದ್ಭವಗೊಂಡುದನ್ನು ಗಮನಿಸಿದರೆ, ಕರಾಡಿಯು, ಸಂಸ್ಕೃತ – ಪ್ರಾಕೃತ ಜನ್ಯವಾಗಿದ್ದು ಕೊಂಕಣಿ ಮರಾಠಿಗಳಿಂದ ತೀರಾ ಭಿನ್ನವಾದ ಸ್ವತಂತ್ರ ಭಾಷೆ ಎನ್ನುವುದರಲ್ಲಿ ಯಾವುದೇ ಸಂಶಯವಿಲ್ಲ. ಸಂಸ್ಕೃತಕ್ಕೆ ಕರ್ಹಾಡಿಯು ಋಣಿಯಾದಷ್ಟು ಕೊಂಕಣಿ ಮರಾಠಿಗಳು ಆಗಿಲ್ಲ ಎನ್ನುವುದು ಸ್ಪಷ್ಟ. ಸಂಸ್ಕೃತವನ್ನು ಕರಾಡಿ ಸರಿಯಾಗಿ ಉಳಿಸಿಕೊಂಡಿದೆ. ನವರಾತ್ರಂ, ಪ್ರಶ್ನ ವಿಮರ್ಶನ ಇತ್ಯಾದಿ.

ಸಂಸ್ಕೃತ ಶಬ್ದ ಯಾವ ಅಂಗದಲ್ಲಿರುತ್ತದೋ ಅದು ತತ್ಸಮವಾಗಿ ಅಥವಾ ತದ್ಭವಗೊಂಡು ಕರಾಡಿಗೆ ಬಂದಾಗಲೂ ಅದೇ ಲಿಂಗದಲ್ಲಿರುತ್ತದೆ. ಹಸ್ತ: (ಸಂ.ಪುಂ)ಹಾತು (ಕ. ಪುಂ) ಭಗಿನೀ (ಸಂ. ಸ್ತ್ರೀ) ಭಯಿಣಿ (ಕ. ಸ್ತ್ರೀ) ವೇತ್ರಂ (ಸ.ನಪುಂ) ಬೇತ (ಕ. ನಪುಂ)

ಸಂಸ್ಕೃತ ಅವ್ಯಯಗಳು ಕರಾಡಿಗೆ ಬಂದಾಗಲೂ ಅವ್ಯಯಗಳಾಗಿಯೇ ಇರುತ್ತವೆ. ಪರ್ಯಂತಂ (ಸಂ. ಅವ್ಯ) ಪರೇಂತ್ರ (ಕರಾಡಿ) ಮಾತ್ರಂ (ಸಂ) ಮಾತ್ರ (ಕರಾಡಿ) ಕರಾಡಿಯಲ್ಲಿ ಕೆಲವು ಅವ್ಯಯಗಳ ಮೇಲೆ ಪ್ರತ್ಯಯ ಸೇರಿಸಿ, ವಿಶೇಷಣ ಪದವನ್ನಾಗಿಸಿ ಉಪಯೋಗಿಸಲಾಗುತ್ತದೆ. ಇವುಗಳನ್ನು ಶಬ್ದೋಪಯೋಗಿ ಅವ್ಯಯಗಳೆನ್ನಬಹುದು.

ಉದಾ: ಕಾಲಿ – ಕಲ್ಲಿಚ್ಯೊ. ಸಕಲ–ಸಕ್ಕಲ್ಲೇನ, ಪರಿ –ಪರ್‍ರಿಚ್ಯೊ. ವೆಲ್ಲಂ–ವೆಲ್ಲೆನ

ಪಿಣ್ಯಕ: (ಸಂ. ಪುಂ. ನಪುಂ) ಪೇಂಡಿ (ಕರಾಡಿ ಸ್ತ್ರೀ) ಲಂಚಾ (ಸಂ.ಸ್ತ್ರೀ) ಲಂಚು (ಕ. ಪು) ಹೀಗೆ ಕೆಲವು ಶಬ್ದಗಳಲ್ಲಿ ಲಿಂಗ ವೈಪರೀತ್ಯ ಕಂಡು ಬರುತ್ತದೆ. "ಲಿಂಗಾನಾಂ ವೈಪರೀತ್ಯಂಚ ಸಂಸ್ಕೃತಾತ್ ಪ್ರಾಕೃತೇ ಭವೇತ್" ಸಂಸ್ಕೃತದಲ್ಲಿ ನಿತ್ಯನಪುಂಸಕ ವಾಚಿಗಳು ಪ್ರಾಕೃತದಲ್ಲಿ ಪುಲ್ಲಿಂಗವಾಗುತ್ತವೆ. ನಿತ್ಯಪುಲ್ಲಿಂಗ ಶಬ್ದಗಳು ಪ್ರಾಕೃತದಲ್ಲಿ ನಪುಂಸಕಲಿಂಗಗಳಾಗುತ್ತವೆ. ಪ್ರಾಕೃತದ ಲಿಂಗ ವೈಪರೀತ್ಯವೇ ಕರಾಡಿಯಲ್ಲಿಯೂ ಅತ್ಯಲ್ಪ ಪ್ರಮಾಣದಲ್ಲಿ ಕಂಡು ಬರುತ್ತದೆ. ಈ ಶಬ್ದಗಳೆಲ್ಲಾ ಪ್ರಾಕೃತ ಮೂಲದವುಗಳೆಂದು ತಿಳಿಯಬೇಕು. ಕಂಬಳಿ, ಗೋಧಿ ಮೊದಲಾದುವು. ಕನ್ನಡದವುಗಳಲ್ಲ. ಸಂಸ್ಕೃತದಿಂದ ತದ್ಭವಗೊಂಡ ಕರಾಡಿ ಶಬ್ದಗಳು.

ನಿಯತವಾಗಿ ಸಂಸ್ಕೃತ ಪ್ರಾಕೃತ ಲಿಂಗವ್ಯವಸ್ಥೆಯೇ ಕರಾಡಿಯಲ್ಲಿದ್ದು, ಈ ಕ್ರಮ ಬೇರೆ ಯಾವುದೇ ಭಾಷೆಯಲ್ಲಿ ಕಂಡು ಬರುವುದಿಲ್ಲ. ಕರಾಡಿ ಶಬ್ದಗಳನ್ನು ಗುರುತಿಸುವಲ್ಲಿ ಮಹತ್ವದ ಪಾತ್ರ ವಹಿಸುತ್ತದೆ. ಪರಭಾಷಾ ಶಬ್ದಗಳಲ್ಲಿ ಅಕಾರಾಂತ ನಪುಂಸಕ, ಇಕಾರಾಂತ ಸ್ತ್ರೀಲಿಂಗ, ಉಕಾರಾಂತ ಪುಲ್ಲಿಂಗ.

ಸಂಸ್ಕೃತದ ಮೂಲ ಶಬ್ದ ತದ್ಭವಗೊಂಡು ಬೇರೆ ಬೇರೆ ಭಾಷೆಗಳಲ್ಲಿ ಬೇರೆ ಬೇರೆ ರೂಪ ತಾಳುತ್ತದೆ.

೧) ಸೇಟಕ: (ಸಂ. ಪುಲ್ಲಿಂಗ: ಸೇರ (ಪ್ರಾಕೃತ) ಸೇರ (ಹಿಂದಿ) ಶೇರ (ಮರಾಠಿ) ಸೇರು (ಕನ್ನಡ) ಸೇರ್ (ತುಳು) ಶೇರು (ಕೊಂಕಣಿ) ಶೇರು (ಕರಾಡಿ) ಪುಲ್ಲಿಂಗ ಆಗಿದೆ.

೨) ಶೃಂಗಂ (ಸಂ. ನಪುಂಸಕ) ಸಿಂಗ: (ಪ್ರಾಕೃತ) ಶಿಂಗ (ಮರಾಠಿ) ಸೀಂಗ (ಹಿಂದಿ), ಸಿಂಗ (ಕನ್ನಡ) ಶೀಂಗ (ಕೊಂಕಣಿ) ಶೀಂಗ (ಕರಾಡಿ) ನಪುಂಸಕಲಿಂಗದಲ್ಲಿದೆ.

೩) ಸೂಚೀ (ಸಂ. ಸ್ತ್ರೀಲಿಂಗ) ಸೂಈ (ಹಿಂದಿ) ಸೂದಿ (ತೆಲುಗು) ಊಸಿ (ತಮಿಳು) ದೂಜಿ (ತುಳು) ಸೂಜಿ (ಕನ್ನಡ) ಸೂಇ, ಸೂವ (ಕೊಂಕಣಿ) ಸೂಜಿ (ಕರಾಡಿ) ಸ್ತ್ರೀಲಿಂಗದಲ್ಲಿದೆ.

ಮೂಲ ಶಬ್ದವಾದ ಸಂಸ್ಕೃತವು ಯಾವ ಲಿಂಗದಲ್ಲಿದೆಯೋ ಅದು ತದ್ಭವಗೊಂಡಾಗ ಅದೇ ಲಿಂಗ ವಿರುವುದು ಕರಾಡಿಯಲ್ಲಿ ಮಾತ್ರ ಎನ್ನುವುದು ಗಮನಾರ್ಹ ವಿಚಾರ. ಇದು ಕರಾಡಿಯ ವೈಶಿಷ್ಟ್ಯವೂ ಹೌದು.

ಆದರೆ ಕರಾಡಿಯಲ್ಲಿ, ಸಂಸ್ಕೃತ, ಪ್ರಾಕೃತ ಕರಾಡಿ ಶಬ್ದಗಳ ಬದಲಿಗೆ ಉಪಯೋಗಿಸುವ ಬೇರೆ ಭಾಷೆಯ ಶಬ್ದಗಳಿಗೂ ಈ ಭಾಷೆಯ ಲಿಂಗವನ್ನೇ ಕೊಡಲಾಗುತ್ತದೆ. ಕನ್ನಡ ತುಳುವಿನ ಕೆಲವು ಶುದ್ಧ ಪ್ರಯೋಗಗಳೂ ಕರಾಡಿಯಲ್ಲಿವೆ. ರಾಜಾಟಿಕ, ಮಕ್ಕಳಾಟಿಕ ಪುಂಡಾಟಿಕ, ಕಲ್ಬಂಡಿ ಇತ್ಯಾದಿ. ಪುಂಡಾಟಿಕೆ, ಮಕ್ಕಳಾಟಿಕೆ ಕನ್ನಡ ಶಬ್ದಗಳು. ರಾಜಾಟಿಕೆ, ಜೋಕ್ಲಾಟಿಕೆ ತುಳು ಶಬ್ದಗಳು. ಕರಾಡಿಯಲ್ಲಿ ಇವು ಸ್ತ್ರೀಲಿಂಗ. "ಆಟಿಕೆ" ಎನ್ನುವುದು ಕನ್ನಡ ಶಬ್ದ. ತುಳುವಿನಲ್ಲಿಯೂ ಪ್ರಯೋಗಿಸಲ್ಪಡುತ್ತದೆ.

"ಕಲ್ಬಂಡಿ" ಕರಾಡಿ ಶಬ್ದ. ತುಳುವಿನಲ್ಲಿ ಕಲ್ಕಂಡಿ, ಚಿಂಚಿಂ ಸಕ್ಕರೆ ಎಂದೂ ಹೇಳುತ್ತಾರೆ. ಕಲ್ಕಂಡ (ನಾ. ಸಂ) ಕಲ್ಲು ಸಕ್ಕರೆ ಎಂದು ಗುರುನಾಥ ಜೋಶಿಯವರ ಕನ್ನಡ-ಕನ್ನಡ ಶಬ್ದ ಕೋಶದಲ್ಲಿದೆ. "ಕಲ್ಕಂಡ" (K. N) Sugar Candy" ಎಂದು ಕಿಟ್ಟೆಲ್ ಕೋಶದಲ್ಲಿದೆ. ಕಲ್ಕಂಡ ಎನ್ನುವುದು ಕನ್ನಡ ಶಬ್ದವಾಗಿದ್ದು ಸಂಸ್ಕೃತದಲ್ಲಿದು ಕಂಡು ಬರುವುದಿಲ್ಲ. ಉಡುಪಿಯ ತುಳು ಶಬ್ದಕೋಶದಲ್ಲಿ ಕಲ್ಕಂಡಿ – ಕಲ್‌ಸಕ್ಕರೆ, ಕಲ್ಲು ಸಕ್ಕರೆ Kallu _ Kandi (Eng- Candy or Skt Khanda) ಎಂದು ಹೇಳಲಾಗಿದೆ. ಇದು ಇಂಗ್ಲೀಷಿನ "Candy" ಯಿಂದ ಬಂದದ್ದಲ್ಲ. ಸಂಸ್ಕೃತದ ಖಂಡಃ ಶಬ್ದ ಪುಲ್ಲಿಂಗದಲ್ಲಿದೆ. ಖಂಡ (ಸಂ) ಖಂಡ, ಖಂಡಾ (ಪ್ರಾಕೃತ) ಕಂಡ (ಕನ್ನಡ) ಖಂಡದ ತದ್ಭವ ರೂಪ "ಕಂಡ" ಕಲ್ ಶಬ್ದದೊಡನೆ ಸೇರಿ "ಕಲ್ಕಂಡ" ಎನ್ನುವ ಕನ್ನಡ ರೂಪ ಉಂಟಾಗಿದೆ. "ಶರ್ಕರಾ ಖಂಡಕಾದ್ಯಾನಿ ದಧಿಕ್ಷೀರ ಘೃತಾನಿಚ ಆಹಾರ ಭಕ್ಷ ಭೋಜ್ಯಂಚ ನೈವೇದ್ಯಂ ಪ್ರತಿಗೃಹ್ಯತಾಂ" ಇಲ್ಲಿ ಖಂಡಕಾ ಶಬ್ದವಿದ್ದು ಇದು ಸ್ತ್ರೀ ಲಿಂಗವಾಗಿದೆ ಹಾಗಾಗಿ ಸಂಸ್ಕೃತದ ಖಂಡಕಾ ಶಬ್ದವೇ ಕರಾಡಿಯಲ್ಲಿ ಖಂಡಿ ಆಗಿದೆ. ಇದು "ಕಲ್' ಶಬ್ದದೊಡನೆ ಸೇರಿ ಕಲ್ಬಂಡಿ ಯಾಯಿತು. ಪ್ರಾಕೃತದ ಖಂಡ" ಶಬ್ದ 'ಖಂಡಿ' ಆಗಿರಲೂ ಬಹುದು.

"ಖಂಡಿ" ಎಂದರೆ "ಕಲ್ಲು ಸಕ್ಕರೆ" ಎನ್ನುವ ಅರ್ಥ ಬರುತ್ತದೆ. ಆದರೆ ಅದಕ್ಕೆ ಕರಾಡಿಯಲ್ಲಿ 'ಕಲ್' ಶಬ್ದವನ್ನು ಯಾಕೆ ಸೇರಿಸಿದರು ಎನ್ನುವ ಜಿಜ್ಞಾಸೆ ಉಂಟಾಗುತ್ತದೆ. ಕರಾಡಿಯಲ್ಲಿ "ಖಂಡಿ" ಎಂದರೆ ಇಪ್ಪತ್ತು ಮಣ ಎನ್ನುವ ಅರ್ಥವೇ ಹೆಚ್ಚಾಗಿ ರೂಢಿಯಲ್ಲಿರುವ ಕಾರಣ, ಅರ್ಥ ಸ್ಪಷ್ಟತೆಗಾಗಿ "ಕಲ್" ಸೇರಿಸಿರಬೇಕು. ಹಾಗೆಯೇ "ಕೈಧಾರ" ಎನ್ನುವ ಶಬ್ದ ಕರಾಡಿಯಲ್ಲಿದೆ. ಇದರರ್ಥ ಕನ್ನಡ, ತುಳುವಿನ "ಕೈದಾರೆ" ಆಗಿದೆ. ಕರಾಡಿಯಲ್ಲಿ" ಧಾರ" ಎಂದರೆ ಈ ಅರ್ಥ ಬರುತ್ತದೆ. ಸಂಸ್ಕೃತದ "ಧಾರಾ" ಧಾರ ಆಗಿದೆ. ಧಾರ ಎಂದರೆ ಇನ್ನೊಂದು ಅರ್ಥ. "ಕರೆಹ" "ಧಾರಕದ್ರ" ಎಂದರೆ ಹಾಲು ಕರೆಯುತ್ತಾಳೆ ಎಂದು ಅರ್ಥ. ಪ್ರತಿದಿನ ಬಳಸಲ್ಪಡುವ ಶಬ್ದವಿದು. ಅರ್ಥ ಸ್ಪಷ್ಟತೆಗಾಗಿ "ಕೈ ಸೇರಿಸಿ" "ಕೈಧಾರ" ಮಾಡಲಾಗಿದೆ. ಇಂತಹ ಅನೇಕ ಶಬ್ದಗಳು ಕರಾಡಿಯಲ್ಲಿವೆ. "ಧಾರಾ" ಸಂಸ್ಕೃತ ಶಬ್ದ ಸ್ತ್ರೀಲಿಂಗವಾದ ಕಾರಣ ಕರಾಡಿಯಲ್ಲಿ "ಕೈಧಾರ"ವೂ ಸ್ತ್ರೀಲಿಂಗವಾಯಿತು.

ಮರಾಠಿಯಲ್ಲಿ ದೇಹ (ಪುಲ್ಲಿಂಗ) ಕಾಯಾ (ಸ್ತ್ರೀಲಿಂಗ) ಶರೀರ (ನಪುಂಸಕಲಿಂಗ) ಭಾಗ (ಪುಂ.ಸ್ತ್ರೀ) ವೇಳ (ಪುಂ. ಸ್ತ್ರೀ) ವೀಣಾ (ಪುಂ. ಸ್ತ್ರೀ) ಹರೀಣ (ಪುಂ ಸ್ತ್ರೀ) ನೇತ್ರ (ಪುಂ. ನಪುಂ) ಈ ರೀತಿಯ ಕ್ರಮ ಕರಾಡಿಯಲ್ಲಿಲ್ಲ.

ವಚನ: ಸಂಸ್ಕೃತದಲ್ಲಿ ಏಕವಚನ, ದ್ವಿವಚನ, ಬಹುವಚನ ಎಂದು ಮೂರು ವಚನಗಳಿವೆ. ಆದರೆ ಪ್ರಾಕೃತದಲ್ಲಿ ದ್ವಿವಚನವಿಲ್ಲ. ದ್ವಿವಚನ ಸ್ಥಾನದಲ್ಲಿ ಬಹುವಚನ ಹೇಳಲ್ಪಡುತ್ತದೆ. ಕರಾಡಿಯೂ ಪ್ರಾಕೃತವನ್ನೇ ಅನುಸರಿಸಿದೆ.

ಉದಾ: ಹಾತು (ಏಕವಚನ) ಹಾತ( ಬಹುವಚನ ) ಪೀಶೊ (ಏ. ವಚನ) ಪೀಶೆ (ಬ. ವಚನ) ಜ್ಞಾನಿ (ಏ. ವಚನ) ಜ್ಞಾನೀ (ಬ. ವಚನ) ಇತ್ಯಾದಿ.

ಸಂಸ್ಕೃತದಿಂದ ತದ್ಭವಗೊಂಡು ಕರಾಡಿಗೆ ಬಂದ ಶಬ್ದಗಳು ಆರಂಭದ ಹ್ರಸ್ವದೀರ್ಘವಾಗುವುದು ದೀರ್ಘ ಹ್ರಸ್ವವಾಗುವುದು ಪ್ರಾಕೃತ ರೂಢಿ. ಅಪವಾದಗಳೂ ಇವೆ. ಸಾಮಾನ್ಯ ಪ್ರತ್ಯಯಗಳು ಸೇರುವಾಗ ಅವು ಹ್ರಸ್ವವಾಗಿ ಸಂಸ್ಕೃತದ ಮೂಲ ರೂಪವನ್ನೇ ಹೊಂದುವುದಲ್ಲದೆ ಸಂಸ್ಕೃತದ ವಿಜಾತೀಯ ಒತ್ತಕ್ಷರಗಳು ಸಜಾತೀಯವಾಗುತ್ತದೆ.

ಹಸ್ತ: (ಸಂ) ಹಾತು (ಕರಾಡಿ) ಹಸ್ತೇನ (ಸಂ) ಹತ್ತೇನ (ಕರಾಡಿ)

ಪುತ್ರ : (ಸಂ) ಪೂತು (ಕರಾಡಿ) ಪುತ್ರೇಣ (ಸಂ) ಪುತ್ತೇನ (ಕರಾಡಿ)......... ಇತ್ಯಾದಿ

ಪ್ರಾಕೃತ ವ್ಯಾಕರಣ ನಿಯಮದಂತೆ ಸಂಯುಕ್ತಾಕ್ಷರದ ಮೊದಲು ದೀರ್ಘಸ್ವರವಿದ್ದರೆ ಅದು ಹ್ರಸ್ವವಾಗುತ್ತದೆ. ಸಂಯಕ್ತಾಕ್ಷರಗಳಲ್ಲಿ ಭಿನ್ನವರ್ಗದ ವ್ಯಂಜನಗಳಿದ್ದರೆ ಅವುಗಳಲ್ಲಿ ಯಾವುದಾದರೂ ಒಂದು ಲೋಪವಾಗಿ ಉಳಿದುದಕ್ಕೆ ದ್ವಿತ್ವ ಬರುತ್ತದೆ ಮರಾಠಿ, ಕೊಂಕಣಿಗಳಲ್ಲಿ ಈ ಕ್ರಮವಿಲ್ಲ ಆರ್ಯ: ( ಸಂ) ಅಜ್ಜೊ(ಕರಾಡಿ) ಅಜ್ಜೊ (ಕೊಂಕಣಿ) ಆಜೋಬಾ(ಮರಾಠಿ) ನಪ್ತಾ (ಸಂ) ನತ್ತು (ಕರಾಡಿ) ನಾತ್ತು (ಕೊಂಕಣಿ)

ಸಂಸ್ಕೃತವಲ್ಲದ್ದೂ ಹ್ರಸ್ವವಾಗುತ್ತದೆ. ತೂಪ –ತುಪ್ಪೇನ : ಮಾಡು– ಮಡ್ಡೇನ ಇತ್ಯಾದಿ.

ತತ್ಸಮಗಳು ಹಾಗೇ ಇರುತ್ತವೆ ಥಲಂ–ಥಲೇನ ರೋಗ:– ರೋಗೇನ ಇತ್ಯಾದಿ

ಕರಾಡಿಯು ಪ್ರಾಕೃತ ಸಂಸ್ಕೃತವನ್ನು ಸರಿಯಾಗಿ ಉಳಿಸಿ ಕೊಂಡಿದೆ. ಕೊಂಕಣಿ ಮರಾಠಿ ಉಳಿಸಿಕೊಂಡಿಲ್ಲ.

ತಾಮ್ರಂ (ಸಂ) ತಂಬೆಂ (ಪ್ರಾಕೃತ) ಕರಾಡಿಯಲ್ಲಿ–ತಂಬೆಂ (ನಪುಂಸಕಲಿಂಗ)

ಆಮ್ರ: (ಸಂ) ಅಂಬೊ (ಪಾಕೃತ) ಕರಾಡಿಯಲ್ಲಿ– "ಅಂಬೊ" (ಪುಲಿಂಗ)

ತಾಮ್ರ ಕುಟ್ಟ: (ಸಂ) ತಂಬುಟ್ಟಿ (ಕರಾಡಿ) ತಾಮ್ಟೊ (ಕೊಂಕಣಿ)ತಾಮ್ರಕಾರ.

ಮರಾಠಿಯಲ್ಲಿ–ತಾಂಬರ, ಆಂಬಾ.ಕೊಂಕಣಿಯಲ್ಲಿ– ತಾಂಬೆಂ, ಆಂಬೊ

ಫತ್ತರಿ (ಕರಾಡಿ) ಫತ್ತೊರು (ಕೊಂಕಣಿ) ಫತ್ಥಾರೀ (ಪ್ರಾಕೃತ)

ಶಬ್ದ ಒಂದೇ ಆದರೂ ಕರಾಡಿ– ಕೋಂಕಣಿಯಲ್ಲಿ ವ್ಯಾತ್ಯಾಸವಿದೆ. ರಭ್ಭಾಕ (ಕರಾಡಿ) ರಾಬ್ಬುಕ (ಕೊಂಕಣಿ) ಸಂಗಿಂತ್ಲ (ಕರಾಡಿ) ಸಾಂಗ್ಲ (ಕೊಂಕಣಿ) ದಲ್ಲಂ (ಕರಾಡಿ) ದಾಲ್ಲಂ (ಕೊಂಕಣಿ) ಹಡಾಕ(ಕರಾಡಿ) ಹಾಡೂಕ (ಕೊಂಕಣಿ) ಹತ್ತಾಂನು (ಕರಾಡಿ)ಹತ್ತಾಂನು (ಕೊಂಕಣಿ) ದೈದ ( ಕರಾಡಿ) ಜಾಯ್‌ದ (ಕೊಂಕಣಿ) ಹಕ್ಕ (ಕರಾಡಿ) ಹಾಕ್ಕಾ (ಕೊಂಕಣಿ) ಈ ಶಬ್ದಗಳೆಲ್ಲಾ ಮರಾಠಿಯಲ್ಲಿಲ್ಲ.

ಶಬ್ದಗಳು ಒಂದೇ ರೂಪ ಕರಾಡಿ ಮರಾಠಿಯಲ್ಲಿ ಅರ್ಥ ಬೇರೆ ಬೇರೆ,

ಕರಮಣೇಂ (ಕರಾಡಿ) ಒಂದು ಪದಾರ್ಥ ಮರಾಠಿ– ಸಂತೋಷಾನುಭವ

ಕರಂಡಿ (ಕರಾಡಿ) ಮುಟ್ಟಾಳೆ ಮರಾಠಿ–ಆಭರಣ ವಿಡುವ ಕರಡಿಗೆ

ಕೊಂಡಾಳೇಂ(ಕರಾಡಿ)ಪಾತ್ರೆತೊಳೆಯವ ಸ್ಥಳ ಮರಾಠಿ–ವರ್ತುಲ

ಕಳಶೀ (ಕರಾಡಿ) ಕಳಸಿಗೆ ಮರಾಠಿ–ಕೊಡ. ಇತ್ಯಾದಿ.

ಕೊಂಕಣಿಯಲ್ಲಿ ಕೆಲವು ನಾಮಪದಗಳಿಗೆ 'ವ' ಅಕ್ಷರವನ್ನು ಸಹಾಯಕವಾಗಿ ತೆಗೆದು ಕೊಳ್ಳಲಾಗುತ್ತದೆ. ನಾತು–ನಾತ್ವ ನಾತ್ವಾಕ, ಚೆರ್ಡುಂ–ಚೆರ್ಡುಂವ ಹೈರು–ಹೈರುವಂ ಗೋರ–ಗೋರವಂ– ಇತ್ಯಾದಿ.

ಮರಾಠಿ ಕೊಂಕಣಿಗಳಲ್ಲಿ ಯಕಾರ ವಕಾರದ ಬಳಕೆ ಧಾರಾಳವಿದೆ ಕರಾಡಿಯಲ್ಲಿ ಯ,ವಗಳ ಬಳಕೆ ಅಷ್ಟಿಲ್ಲ.

ಅಕಾರಾಂತಾದಿ ಸಂಸ್ಕೃತ ಶಬ್ದಗಳು ತದ್ಭವಗೋಂಡು ಕರಾಡಿಯಲ್ಲಿ ಉಕಾರಾಂತ ಒಕಾರಾಂತ ವಾದರೂ ಪ್ರತ್ಯಯ ಸೇರಿದಾಗ, ಪುನ: ಮೂಲ ಸಂಸ್ಕೃತದಂತೆ ಆಕಾರಾಂತವಾಗುತ್ತದೆ. ಕರಾಡಿಯು ಕೊಂಕಣಿ, ಮರಾಠಿಗಿಂತ ಭಿನ್ನವಾಗಿದ್ದು ಸ್ವತಂತ್ರ ಭಾಷೆ ಎನ್ನುವುದರಲ್ಲಿ ಅನುಮಾನವಿಲ್ಲ.

ಸರ್ವನಾಮಗಳು:–ಸರ್ವನಾಮಗಳು ಭಾಷೆಯ ಸ್ಥಿರ ಹಾಗೂ ಅಭೇದ್ಯ ಭಾಗಗಳು. ಇವು ಭಾಷೆಯ ಸಂಬಂಧ, ಸ್ವರೂಪ, ನಿರ್ಧಾರದಲ್ಲಿ ಅತ್ಯಂತ ಸಹಕಾರಿಗಳಾಗಿವೆ. ಇವು ಪುರುಷಾರ್ಥ, ಪ್ರಶ್ನಾರ್ಥ, ಸಂಬಂಧಾರ್ಥಕಗಳೆಂದು ಮೂರು ವಿಧ.

ಪುರುಷಾರ್ಥಕ :– ಹಾವಂ,ತೂಂ, ತೋಂ, ಓ,ಈ,ಏಂ.     ಪ್ರಶ್ನಾರ್ಥಕ :– ಕೋಣ

ಸರ್ವನಾಮಗಳು ಸಪ್ತ ವಿಭಕ್ತಿಗಳನ್ನು ಹೊಂದಿದ್ದು ರಿ, ಣೆ, ಣ, ಣೆ,ಇ, ಚ, ಕ, ಟು, ಟುಂ ಇವು ವಿಭಕ್ತಿ ಪ್ರತ್ಯಯಗಳಾಗಿವೆ

ಇವನು_ಹಾ(ಮರಾಠಿ)ಹೋ(ಕೊಂಕಣಿ) ಓ,ಎಣ(ಕರಾಡಿ)

ಇವರು– ಹೇ(ಮ) ಹೀಂ, ಹಾನ್ನಿ (ಕೋಂ) ಏ, ಎಣೆ (ಕರಾಡಿ)

ಇವಳು– ಹೀ( ಮ) ಹಿ, ಹಾನ್ನಿ(ಕೊಂ) ಈ, ಎಣೆ (ಕರಾಡಿ)

ಇವರು– ಹ್ಯಾ (ಮ) ಹೀ, ಹಾನ್ನಿ (ಕೊಂ) ಏ,ಎಣೆ (ಕರಾಡಿ)

ಇದು– ಹೇ (ಮ) ಹೇಂ (ಕೊಂ)ಏಂ, ಎಣ (ಕರಾಡಿ)

ಇವು– ಹೀ (ಮ) ಹೀಂ, ಹಾನ್ನಿ (ಕೊಂ) ಈಂ, ಎಣೆ (ಕರಾಡಿ)

ಹಾವಂ ನಾನು ಪ್ರ.ವಿ.ಏ.ವ–ಹಾವಂ,ಹವೆಂ (ಕರಾಡಿ) ಹಾಂವ, ಹಾಂಉ(ಕೊಂಕಣಿ) ಮಿ (ಮರಾಠಿ)

ಚ.ವಿ ಏಕವಚನ– ಮುಕ್ಕ (ಕರಾಡಿ)ಬ.ವ. ಅವುಜ ಅವುಂಜ, ಈ ವಿಭಕ್ತಿ ರೂಪ ಮರಾಠಿ ಕೊಂಕಣಿಗಳಲ್ಲಿಲ್ಲ.

ಪಂಚಮಿ ಏಕವಚನ : ಮಜ್ಜಂಟು (ಕರಾಡಿ) ಮಜೆಸೂನ, ಮಜೆ ಊನ,(ಕೊಂಕಣಿ) ಮಜಹೂನ (ಮರಾಠಿ)

ಏಕ, ಬಹುವಚನ :– ತೆಜ್ಜ ತಂಚ(ಕರಾಡಿ) ತಿಜ್ಞೊ ತಿಗಲೊ– ತ್ಯಾಂಚೊ, ತೀಂಚೊ, ತ್ಯಾಂ ಗೆಲೊ, ತೀಂಗೆಲೊ(ಕೊಂಕಣಿ) ತಿಚಾ, ತ್ಯಾ (ಮರಾಠಿ)

ಹೀಗೆ ಸರ್ವನಾಮಗಳ ರೂಪಗಳು, ಕರಾಡಿ, ಕೊಂಕಣಿ, ಮರಾಠಿಗಳಲ್ಲಿ ಬೇರೆ ಬೇರೆಯೇ ಆಗಿದ್ದು, ಮರಾಠಿ, ಕೊಂಕಣಿಗಳಂತೆ ಕರಾಡಿಯೂ ಸ್ವತಂತ್ರ ಭಾಷೆಯಾಗಿದೆ.

ಸಂಖ್ಯಾವಾಚಿಗಳು :– ಸಂಖ್ಯಾವಾಚಕಗಳನ್ನು ಸ್ವತಂತ್ರ ನಾಮ ಪದಗಳ ಪಾಲಿಗೆ ಸೇರಿಸುತ್ತಾರೆ. ಭಾಷಾನುವಂಶಿಕ ಸಂಬಂಧವನ್ನು ಗುರುತಿಸುವಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ. ಸಂಖ್ಯಾ ವಾಚಿಗಳು ಸಂಸ್ಕೃತದಿಂದ ತದ್ಭವಗೊಂಡು ಕರಾಡಿಗೆ ಬಂದಿವೆ.

ಏಕ : (ಸಂ) ಏಕ ( ಕರಾಡಿ) ದ್ವಾ(ಸಂ) ದೋನಿ (ಕರಾಡಿ) ತ್ರಯ : (ಸಂ) ತೀನಿ (ಕರಾಡಿ)

ಚತ್ವಾರ : (ಸಂ) ಚಾರಿ(ಕರಾಡಿ) ಪಂಚ(ಸಂ) ಪಾಂತ್ಸ (ಕರಾಡಿ) ವಿಂಶತಿ: (ಸಂ) ವೀಸ (ಕರಾಡಿ)

ತ್ರಿಂಶತ್ (ಸಂ) ತೀಸ (ಕರಾಡಿ) ಶತಂ(ಸಂ) ಶೆಹೆಂ (ಕರಾಡಿ) ಇತ್ಯಾದಿ.

ಸಂಖ್ಯಾವಾಚಕಗಳು ಸಂಸ್ಕೃತ ನಾಮಪದಗೊಳಗಾದ್ದರಿಂದ ನಾಮಪದಗಳ ರೂಪವನ್ನು ಹೊಂದುತ್ತವೆ. ನಾಲ್ಕರ ವರೆಗಿನ ಸಂಖ್ಯಾಶಬ್ದಗಳಿಗೆ ಮೂರು ಲಿಂಗಗಳಲ್ಲಿಯೂ ಬೇರೆ ಬೇರೆ ರೂಪಗಳಿವೆ.

| ವಿಭಕ್ತಿ : | ಸಂ.ಪುಂ. | ಕ. ಪುಲ್ಲಿಂಗ | ಸಂ ಸ್ತ್ರೀ | ಕರಾಡಿಸ್ತ್ರೀ | ಸಂ. ನಪುಂಸಕ | ಕರಾಡಿ ನಪುಸಂಕ |
|---|---|---|---|---|---|---|
| ಪ್ರಥಮಾ | ಏಕ: | ಏಕು | ಏಕ | ಏಕಿ | ಏಕಂ | ಏಕ |
| ದ್ವಿತೀಯಾ | ಏಕಂ | ಎಕ್ಕಾಕ | ಏಕಾಂ | ಏಕ್ಕೀಕ | ಏಕಂ | ಎಕ್ಕಾಕ |
| ತೃತೀಯಾ | ಏಕೇನ | ಎಕ್ಕೇನ | ಏಕಯ | ಏಕ್ಕಿಂಟು | ಏಕೇನ | ಎಕ್ಕೇನ |

ತದ್ಧಿತ ರೂಪಗಳು :– ಕರ್ಪಲ್ಲಂ– ಕರ್ಪುಸಂ–ಕರ್ಪುಸಾಣೆ ಖಾರು– ಖಾರಟ– ಖಾರಟಾಣೆ
ಗೋಡ– ಗೋಡಶಂ– ಗೋಡ್ಡಾಣಿ ಆಂಬ– ಅಂಬಟ– ಅಂಬಟಾಣಿ
ದೀಗ– ದೀಗಸಂ ದಿಗ್ಗಾಣಿ ಕಾಳಂ–ಕಾಳಶಂ–ಕಾಳಾಣಿ–ಇತ್ಯಾದಿ

ಇಂತಹ ತಧಿತ ರೂಪಗಳು ಕರಾಡಿಯಲ್ಲಿರುವುದು ಭಾಷಾ ವೈಶಿಷ್ಟವೆನ್ನಬಹುದು.

ವಾಕ್ಯರಚನೆ : ಶಬ್ದಗಳಿಗಿರುವ ಅರ್ಥ ಸಂಬಂಧವನ್ನನುಸರಿಸಿ ನಿಯತ ಸ್ಥಾನದಲ್ಲಿ ಆ ಪದಗಳನ್ನಿರಿಸಿ ವಾಕ್ಯರಚನೆ ಮಾಡುವುದು ಸಾಮಾನ್ಯ ಕ್ರಮ ಕರಾಡಿಯಲ್ಲಿ ಸಂಸ್ಕೃತದಂತೆ ವಾಕ್ಯರಚನೆ ನಡೆಯುತ್ತದೆ.

ಸಂಸ್ಕೃತ :– ರಾಮ: ಗಚ್ಛತಿ(ರಾಮ ಹೋಗುತ್ತಾನೆ) ಕರಾಡಿಯಲ್ಲಿ– ರಾಮವೇರ

ಸಂಸ್ಕೃತದಂತೆ ಕ್ರಿಯಾಪದ ಮೊದಕು ಪ್ರಾಯೋಗಿಸಲಾಗುತ್ತದೆ.

ಸಂಸ್ಕೃತ :– ಸ: ಅಸ್ತಿ ವಾ ನವ (ಅವನು ಇದ್ದಾನೊ ಇಲ್ಲವೊ) ಕರಾಡಿ– ತೋವಟ್ಟಕಿನಾ ?

ಕೇವಲ ಕ್ರಿಯಾ ಪದ ಮಾತ್ರ ಉಪಯೊಗಿಸುವುದಿದೆ

ಸಂಸ್ಕೃತ– ಗಚ್ಛ (ಹೋಗು) ಕರಾಡಿ – ವ : ಚ

ಕ್ರಿಯಾ ಪದವಿಲ್ಲದೆಯೂ ವಾಕ್ಯ ಮಾಡಲಾಗುತ್ತದೆ

ಸಂಸ್ಕೃತ– ಸ : ಗೋಪಾಲ : (ಅವನು ಗೋಪಾಲ) ಕರಾಡಿ– ತೋ ಗೋಪಾಲು.

ಹಿಂದಿಯಲ್ಲಿಯೂ ಇಂತಹ ಪ್ರಯೋಗವಿದೆ– ವಹ ಗೋಪಾಲ (ಅವನು ಗೋಪಾಲ)

ವಿಶೇಷಣ ವಿಶೇಷಗಳು ಸಮಾನ ಲಿಂಗ ವಚನ ವಿಭಕ್ತಿಗಳಲ್ಲಿ ಪ್ರಯೋಗಿಸಲ್ಪಡುತ್ತವೆ.

ಸಂಸ್ಕೃತ– ವಿಕಸಿತಂ ಪುಷ್ಪಂ (ಅರಳಿದ ಹೂ) ವಿಕಸಿತಾನಿ ಪುಷ್ಪಾಣಿ (ಅರಳಿದ ಹೂಗಳು)

ಕರಾಡಿ–ಫುಲ್ಲಲ್ಲಂ ಫೂಲ (ಅರಳಿದ ಹೂ) ಫುಲ್ಲಲ್ಲಂ ಫುಲ್ಲಂ (ಅರಳಿದ ಹೂಗಳು)

ಒಂದು ಭಾಷೆಯು ತನ್ನದೇ ಆದ ಆಖ್ಯಾತರೂಪವನ್ನು ಹೊಂದಿದ ತರುವಾಯ ಇತರ ವಿಷಯಗಳಲ್ಲಿ ಅದು ಮೂಲವನ್ನೇ ಹೋಲುತ್ತಿದ್ದರೂ ಅದೊಂದು ಭಿನ್ನಭಾಷೆಯೆಂದೇ ತಿಳಿಯಲಾಗುವುದು ಅದೇ ರೀತಿಯಲ್ಲಿ ಕರಾಡಿಯಲ್ಲಿ ತನ್ನದೇ ಆದ ಆಖ್ಯಾತ ರೂಪಗಳನ್ನು ಪಡೆದಿದೆ. ಆದುದರಿಂದ ಇದು ಕೊಂಕಣಿಯಾ ಮರಾಠಿಯ ಒಳಭೇದವಾಗಿರದೆ ಇವುಗಳಿಂದ ಪ್ರತ್ಯೇಕವಾದ ಸ್ವತಂತ್ರ ಭಾಷೆಯಾಗಿರುತ್ತದೆ.

ಆಸೀತ್ (ಸಂಸ್ಕೃತ) ಇದ್ದನು. ಕರಾಡಿಯಲ್ಲಿ– ಅಚ್ಛಿಲೊ, ಅಚ್ಛಿಲ, ಅಚ್ಛಿಲಂ
ಕೊಂಕಣಿಯಲ್ಲಿ– ಆಶೀಲೋ, ಅಶೀಲಿ, ಆಶೀಲಂ.
ಆಸ್ತು (ಸಂ) ಇರಲಿ ಕರಾಡಿಯಲ್ಲಿ –ಅತ್ತು ಕೊಂಕಣಿ– ಆಸ್ಸೊ
ಅಸ್ತಿ (ಸಂಸ್ಕೃತ) ಇದೆ ಕೊಂಕಣಿಯಲ್ಲಿ– ಆಸ್ಸ, ತೋಆಸ್ಸ, ತೀಆಸ್ಸ, ತೇಂ ಆಸ್ಸ( ಇದ್ದಾನೆ, ಇದ್ದಾಳೆ, ಇದೆ)
ಕರಾಡಿಯಲ್ಲಿ ಅತ್ಸ ನಪುಂಸಕ– ತೇಂ ಅತ್ಸ (ಅದು ಇದೆ)

ಕೊಂಕಣಿಯಲ್ಲಿ– "ಸೋಧಿತಾ" ಇದ್ದದ್ದು ಮರಾಠಿಯಲ್ಲಿ " ಸೋಧಿತೋ"ಕರಾಡಿಯಲ್ಲಿ ಸೊದ್ದಿರ" ಆಗಿದೆ ಕೊಂಕಣಿಯಲ್ಲಿನ ಕೊನೆಯ ಆಕಾರವು ಮರಾಠಿಯಲ್ಲಿ ಒಕಾರವಾಗುತ್ತದೆ. ಕರಾಡಿಯಲ್ಲಿ ತಾವೇ ರಕಾರವಾದುದಲ್ಲ. "ಥಿ"ಯು ಅಲ್ಪ ಪ್ರಾಣವಾಗಿ ದ್ವಿತ್ವವನ್ನು ಪಡೆದಿದೆ.

ಕೊಂಕಣಿಯಲ್ಲಿ "ಸೋಧಿತಲೋಂ" ಮರಾಠಿಯಲ್ಲಿ "ಸೋದಿನ್" ಕರಾಡಿಯಲ್ಲಿ "ಸೊದ್ದಿತಂ" ಕೊಂಕಣಿಯ ಒಲವು ಹ್ರಸ್ವಸ್ವರದೆಡೆಗಿದ್ದರೆ, ಮರಾಠಿಯ ಒಲವು ದೀರ್ಘಸ್ವರದೆಡೆಗೆ. ಆದರೆ ಕರಾಡಿಯ ಒಲವು ಒತ್ತಕ್ಷರದೆಡೆಗೆ. ಗೆಲಿ (ಕೊಂಕಣಿ) ಗೆಲೀ (ಮರಾಠಿ)ಗೆಲ್ಲಿ (ಕರಾಡಿ) ಕರಾಡಿಯ ಎಲ್ಲಾಧಾತುಗಳು ಸಂಸ್ಕೃತ, ಪ್ರಾಕೃತ ಮೂಲದವು. "ಮರಾಠಿಯಲ್ಲಿರುವ ನೂರಾರು ಕ್ರಿಯಾಪದಗಳು ಸಂಸ್ಕೃತದ ಮೂಲದವುಗಳಲ್ಲ. ಅವು ಯಾವ ಮೂಲದವುಗಳೆಂದು ನಿರ್ಧರಿಸಲು ಎಂಥ ನಿಪುಣನಾದ ಭಾಷಾ ವಿಜ್ಞಾನಿಯಿಂದಲೂ ಸಾಧ್ಯಾವಿಲ್ಲ; ಮರಾಠಿಪದಗಳಿಗೆ ಕನ್ನಡದಲ್ಲಾಗಲಿ ಸಂಸ್ಕೃತದಲ್ಲಾಗಲಿ ಮೂಲವು ದೊರೆಯುವುದಿಲ್ಲ " ಎಂದು ಶ್ರೀ ಬಸ್ತಿ ಪುಂಡಲೀಕ ವೆಂಕಟೇಶ ಶೆಣೈ ಯವರ ಅಭಿಪ್ರಾಯವಾಗಿದೆ ಕರಾಡಿಗೆ ಸಂಸ್ಕೃತ, ವೈದಿಕ ಸಂಸ್ಕೃತ, ಪ್ರಾಕೃತದಿಂದ ಧಾತುಗಳು ಬಂದಿರುತ್ತವೆ. ೧೫೦ ರಷ್ಟು ಪ್ರಾಕೃತದಿಂದ ಬಂದಧಾತುಗಳೂ ೮೫೦ ರಷ್ಟು ಸಂಸ್ಕೃತದಿಂದ ಬಂದ ಧಾತುಗಳಿದ್ದು ಕೇವಲ ೪೦ ಧಾತುಗಳ ಮೂಲ ಸಿಗುವುದಿಲ್ಲ, ಆದ್ದರಿಂದ ಕರಾಡಿಗೂ ಮರಾಠಿಗೂ ಯಾವುದೇ ಸಂಬಂಧವಿಲ್ಲವೆಂದು ನಿಸ್ಸಂಶಯವಾಗಿ ಹೇಳಬಹುದು. ಕರಾಡಿಯಲ್ಲಿ ಕೆಲವು ವಿಶೇಷ ಧಾತುಗಳಿವೆ– ಚಿಚ್ಚುಂಡಾರ, ಪಿಕ್ಕುಂಡಾರ, ರೈಸುಪರ, ಇತ್ಯಾದಿ.

ನಿಷೇಧಾರ್ಥಕ :– ಕ್ರಿಯೆ ನಡೆಯಲಿಲ್ಲ ಎನ್ನುವುದನ್ನು ಸೂಚಿಸುವುದು ನಿಷೇಧಾರ್ಥಕ ಸಂಸ್ಕೃತ, ಹಿಂದಿಗಳಲ್ಲಿ ನಿಷೇಧಾರ್ಥಕ ಪ್ರತ್ಯಯ ಪ್ರತ್ಯೇಕವಾಗಿ ನಿಲ್ಲುತ್ತದೆ. ದ್ರಾವಿಡ ಭಾಷೆಗಳಲ್ಲಿ ಬೆರೆತು ಹೋಗುವುದು ಹೆಚ್ಚಾದರೂ ಹೊಸಗನ್ನಡದಲ್ಲಿ ಅಲ್ಲ ಇಲ್ಲ,ಬೇಡ ಮೊದಲಾದ ಪ್ರತ್ಯೇಕ ರೂಪಗಳಿವೆ. ಇವು ಲಿಂಗವಚನಾದಿ ವಿವೇಕ್ಷೆಗೊಳಗಾಗದೆ ಅವ್ಯಯದಂತೆ ಉಪಯೋಗಿಸಲ್ಪಡುತ್ತದೆ. ಕರಾಡಿಯಲ್ಲಿಯೂ ನಿಷೇಧಾರ್ಥಕಗಳಿವೆ.

ಸಂಸ್ಕೃತದಲ್ಲಿ – ನಗಚ್ಛತಿ, ಮಾ ಗಚ್ಛ, ನಹಿ ನಹಿರಕ್ಷತಿ, ಗಚ್ಛತಿವಾನ?

ಹಿಂದಿಯಲ್ಲಿ –ನಜಾಊಂಗಾ, ಮತ್‌ಜಾಓ, ನಹೀಂ ಕರೂಂಗಾ, ಕಹೀಂನ ಕಹೀಂ; ಸಂಸ್ಕೃತ ಮತ್ತು ಹಿಂದಿಯಲ್ಲಿ ಕ್ರಿಯಾಪದಕ್ಕಿಂತ ಮೊದಲು ನಿಷೇಧಾರ್ಥಕ ಶಬ್ದಗಳು ಸೇರುತ್ತವೆ ಪ್ರಶ್ನಾರ್ಥಕದಲ್ಲಿ ಕೊನೆಗೆ ಬರುತ್ತವೆ. ಹಿಂದಿಯಲ್ಲಿ ಎರಡು ಕ್ರಿಯಾ ವಿಶೇಷಣಗಳ ನಡುವೆಯೂ ಬರುತ್ತದೆ. ಸಂಸ್ಕೃತ, ಹಿಂದೀ ನಿಷೇಧಾರ್ಥಕ ಕೃದಂತಗಳು ಲಿಂಗ ವಚನಾಸಾರ ವ್ಯತ್ಯಾಸವಾಗುತ್ತವೆ. ಸಂಸ್ಕೃತ ಹಿಂದಿಗಳಲ್ಲಿ ವಿಧ್ಯರ್ಥಕದಲ್ಲಿ (ಆಜ್ಞೆ, ಪ್ರಾರ್ಥನೆ, ಅನುಮತಿ) ಮಾ, ಮತ್ ಸೇರಿದರೆ ನಿಷೇಧಾರ್ಥದಲ್ಲಿ, ನ ನಹೀಂ ಸೇರುತ್ತದೆ.

ಸಂಸ್ಕೃತ – ಸ: ನ ಗತ : ತೌ ನ ಗತೌ । ತೇ ನ ಗತಾ: ।
ಸಾ ನ ಗತಾ। ತೇ ನ ಗತೇ। ತಾ: ನ ಗತಾ : ।
ಹಿಂದಿಯಲ್ಲಿ – ನಹೀಂ ಗಯಾ। ನಹೀಂ ಗಯೇ। ನಹೀಂ ಗಯಿೀ । ನಹೀಂ ಗಯಿಂ ।

ಕರಾಡಿಯಲ್ಲಿಯೂ ನಿಷೇಧಾರ್ಥಕ ಪ್ರತ್ಯಯ ನ, ನಾಗಳು ಕೃದಂತಗಳ ಹಿಂದೆ ಬರುತ್ತವೆ.

ನ+ ಹೋಯೆ– ನ್ಹೋಯೆ (ಅಲ್ಲ) ಅಕಾರಲೋಪವಾಗಿ ಅವ್ಯಯದಲ್ಲಿ ಬೆರೆತು ಹೋಗಿದೆ.

ನ+ ಅಸಂ– ನಾಸಂ ನಾ+ದವುನು= ನಾದೌನು (ಗೆಲ್ಲೊ) ಇಲ್ಲದೆ ಆಗಿ ಹೋದ.

ನ+ ದೇರಿಂ–ನದ್ದೇರಿಂ (ಇಡಲಾರೆ) ನ+ಅಚ್ಛಿಲ್ಲೊ– ನತ್ಥಿಲ್ಲೊ (ಇರಲ್ಲಿಲ್ಲ)

ಪ್ರಶ್ನಾರ್ಥದಲ್ಲಿ– ಸಂಸ್ಕೃತ ಹಿಂದಿಗಳಂತೆ– ತೂಂ ಏರಕಿನಾ ? ನೀಸು ಬರುತ್ತಿಯೋ ಇಲ್ಲವೊ ತೊ ವೆರಕಿನಾ ?

(ಅರನು ಹೋಗುತ್ತಾನೊ ಇಲ್ಲವೋ ? ) ವಚ್ಚುನು + ನ ವಚ್ಚನ (ಹೋಗುವಿದಿಲ್ಲ) ಇತ್ಯಾದಿ.

ಸಂಭಾವನರೂಪ : ಕ್ರಿಯೆಯು ನಡೆಯುವಲ್ಲಿ ಸಂಶಯ ಅಥವಾ ಊಹೆ ತೋರುವಲ್ಲಿ ಸಂಭಾವನಾರ್ಥಕ ಕ್ರಿಯಾಪದಗಳನಿಸುವವು ಕರಾಡಿಯಲ್ಲಿ " ಣು ಪುರೊ" ವೋದಲಾದವನ್ನು ಸೇರಿಸಿ ಸಂಭಾವನರೂಪ ಮಾಡಲಾಗುತ್ತದೆ.

ತೋ ಎಂತಲೋಣ ಅಠೇಂತ್ಸ (ಅವನು ಬಂದಾನೆಂದು ಎಣಿಸಿದ್ದೆ)

ತೋ ಯಾಪುರೊ (ಅವನು ಬರಬಹುದು) ಇತ್ಯಾದಿ

ವಿಧ್ಯರ್ಥಕ : ಆಶೀರ್ವಾದ, ಅಪ್ಪಣೆ, ಹಾರೈಕೆ ಆಜ್ಞೆ ಇವುಗಳನ್ನು ತೋರುವುದು ಕ್ರಿಯಾಪದಗಳಿಗೆ ವಿಧ್ಯರ್ಥಕಗಳೆಂದು ಹೆಸರು.

ಹಾರೈಕೆ –ದೇವು ತುಕ್ಕ ರೋಕ ಕರು. (ದೇವರು ನಿನಗೆ ಒಳಿತು ಮಾಡಲಿ)

ಸಮ್ಮತಿ– ತೋ ಪಾಠು ವಾಚು–(ಅವನು ಪಾಠ ಓದಲಿ)

ಆಜ್ಞೆ– ತೂಂ ಕೆಲಸ ಕರಿ (ನೀನು ಕೆಲಸಮಾಡು)

ಆಶೀರ್ವಾದ– ತುಕ್ಕ ರೋಕ ದವು (ನಿನಗೆ ಒಳಿತಾಗಲಿ)

ದಂತ :–ಧಾತುಗಳಿಗೆ ಕೃತ್‌ಪ್ರತ್ಯಯ ಸೇರಿ ಆದರೂ ಪದಗಳು ಕೃದಂತಗಳೆನಿಸಿ ಪದವು ಇವು ಮೂರು ವಿಧ : ಕೃದಂತನಾಮ ಕೃದಂತಭಾವನಾಮ, ಕೃದಂತಾವ್ಯಯ

ಕೃದಂತನಾಮ : ಕೆಲ್ಲೊ, ಕೆಲ್ಲಿ ಇತ್ಯಾದಿ

ಕೃದಾಂತಭಾವನಾಮ :– ಖಾರ– ಖಾಣು, ನ್ಹಾರ– ನ್ಹಾಣ, ಪಿಕ್ಕರ– ಪೀಕ, ಪೀರ–ಪಿವಣ ಇತ್ಯಾದಿ

ಕೃದಂತಾವ್ಯಯ –ಎವುನು, ಹಾಸುನು, ಸಮರ್ಪಣ– ಇತ್ಯಾದಿ

ಪ್ರಾಕೃತದ ಪಾವೂಖು(ಎವುನು–ಕರಾಡಿ) ಹಸೇಊಣು (ಪ್ರಾಕೃರ) ಹಾಸುನು( ಕರಾಡಿ) ಸಮವ್ವೇಊಣ (ಪ್ರಾಕೃತ) ನವಲವಳಣ (ಕರಾಡಿ) ಪ್ರಾಕೃತದ ಈ " ಊಣ" ಪ್ರತ್ಯಯ ಕರಾಡಿಯಲ್ಲಿ "ಊನ"ಆಗಿದೆ.

ಮೂತ– ಮುತ್ತಿರ– ಮುತೋನ್ಡೋ ಕುದ್ದಲ–ಕುದ್ದರ– ಕುದ್ದೋಡೊ

ಮುತ್ತಿರ–ಮೂತ–ಮುತ್ತು ಸಾಣು ಶಿಕ್ಕಾರ–ಶಿಕ್ಕಟ–ಶಿಕ್ಕುಪಾಣು

ಈ ರೀತಿಯ ವಿಶೇಷ ಕೃದಂತ ಭಾವನಾಮಗಳು ಕರಾಡಿ, ಕೊಂಕಣಿಯಲ್ಲಿ ಕಂಡುಬರುವುದು ಭಾಷಾ ವೈಶಿಷ್ಟವೆನ್ನಬಹುದು.

ಪ್ರೇರಣಾರ್ಥಕ ಕ್ರಿಯೆ :- ಕತೃವು ಸ್ವತ: ಕಾರ್ಯವನ್ನು ಮಾಡದೆ ಕ್ರಿಯೆಗಳ ಮೂಲಕ ಬೇರೆಯವರಿಗೆ ಮಾಡಲು ಪ್ರೇರೇಪಿಸಿದಾಗ ಅದು ಪ್ರೇರಣಾರ್ಥಕ ಕ್ರಿಯೆಯಾಗುತ್ತದೆ ಕರಾಡಿಯಲ್ಲಿಯೂ ಪ್ರೇರಣಾರ್ಥಕ ಕ್ರಿಯೆ ಇದ್ದು ಇದು ಹಿಂದಿಯನ್ನು ಅನುಸರಿಸಿದೆ ಪ್ರೇರಣಾರ್ಥದದಲ್ಲಿ ಅಕರ್ಮಾಕಧಾತು ಸಕರ್ಮಕವಾಗುತ್ತದೆ. ಸಕರ್ಮಕ ದ್ವಿಕರ್ಮಪಕ ವಾಗುತ್ತದೆ

ಸಂಸ್ಕೃತದಲ್ಲಿ- ಕರೋತಿ-ಕಾರಯತಿ/ ಪಠತಿ- ಪಾಠಯತಿ/ಪಿಬತಿ- ಪಿಬಯಶಿ

ಹಿಂದಿಯಲ್ಲಿ-ಖಾನಾ ಖಿಲಾನಾ ಖಿಲವಾನಾ/ಪೀನಾ, ಪಿಲಾನಾ ಫಿಲವಾನಾ/

ಹಿಂದಿಯಲ್ಲಿ ಪಹಲೀ ಪ್ರೇರಣಾರ್ಥಕ ಕ್ರಿಯಾ ದೂಸರೀ ಪ್ರೇರಣಾರ್ಥಕ ಕ್ರಿಯಾ ಎಂದು ಎರಡು ವಿಧ.

ಪಹಲೀ- ಮಾಂ ಬಚ್ಚೇಕೋ ದೂಧ ಪಿಲಾತಿಹೈ

ದೂಸರೀ- ಮಾಂ ಬಚ್ಚೇಕೋ ನೌಕರಸೇ ದೂಧ ಪಿಲಾತೀ ಹೈ

ಕರಾಡಿಯಲ್ಲಿ- ನ್ಹಾರ- ನ್ಹಾಂಡ್ರ-ನ್ಹಾಣವೇರ

ಸ್ವತ: ಅವಯಿ ನ್ಹಾರ

ಮೊದಲ ಪ್ರೇರಣಾರ್ಥಕ- ಅವಯಿ ಚೆಡ್ಡುವಾಕ ನ್ಹಾಂಡ್ರ

ಎರಡನೇ ಪ್ರೇರಣಾರ್ಥಕ- ಅವ ಚೆಡ್ಡುವಾಕ ಕೆಲಸಾಚೇಂಟು ನ್ಹಾಣವೇರ

ಪೀರ-ಪಿವೇರ-ಪಿವವೇರ ನ್ಹಾರ-ನ್ಹಾಂಡ್ರ-ನ್ಹಾಣವೇರ

ಬೂಡ್ರ -ಬೂಡೇರ-ಬೂಡವೇರ, ವಾಚಿರ- ವಾಚೇರ ವಾಚವೇರ ಇತ್ಯಾದಿ

ಎರಡನೇ ಪ್ರೇರಣಾರ್ಥಕ ಕ್ರಿಯೆಯ ಸ್ಪಷ್ಟವಾದ ಬಳಕೆ ಸಾಕಷ್ಟಿಲ್ಲ ಕರಾಡಿಯಲ್ಲಿ ವಿಶೇಷವಾಗಿ ಕೃದಂತಗಳ ಮೇಲೆ ಪ್ರೇರಣಾರ್ಥಕ ಪ್ರತ್ಯಯಗಳನ್ನು ಸೇರಿಸಿ ಪ್ರೇರಣಾರ್ಥಕ ಕ್ರೀಯಾಪದಗಳನ್ನಾಗಿ ಮಾಡಲಾಗುತ್ತದೆ

ಹಗ್ಗರ- ಹಗ್ಗೇರ (ಧಾತು) ಹಗ್ಗೋಡೊ- ಹಗ್ಗಡೇರ

ಕುತ್ಸರ- ಕುತ್ಸೇರ (ಧಾತು)ಕುತ್ಸಟ-ಕುತ್ಸಟೇರ

ಕರ್ಪರ- ಕರ್ಪೇರ(ಧಾತು)ಕರ್ಪಟ- ಕರ್ಪಟೇರ

ತದ್ದಿತಗಳು ಮೇಲೆಯೂ ಪ್ರೇರಣಾರ್ಥಕ ಪ್ರತ್ಯಯ ಸೇರಿಸಿ ಪ್ರೇರಣಾರ್ಥಕ ಕ್ರಿಯಾಪದ ಮಾಡಲಾಗುತ್ತದೆ

ಪುಸ್ಕುಟ- ಪುಸ್ಕುಟೇರ ಹರ್ಪಟೋ- ಹರ್ಪಟೇರ ಕಳುಂಬಂಟ ಕಳುಂಬುಟೇರ

ಪ್ರೇರಣಾರ್ಥಕ ಕ್ರೀಯೆ ವಿಭಕ್ತಿರೂಪ ಮೊದಲಾದುವುಗಳನ್ನು ಗಮನಿಸಿದಾಗ ಹಿಂದಿಯ ಪ್ರ-ಭಾವ ಕರಾಡಿಯ ಮೇಲೆ ಬಿದ್ದುದು ಸ್ಪಷ್ಟವಾಗುತ್ತದೆ.

ನೀಷೇಧ ಸಂಭಾವನಾ, ಪ್ರೇರಣಾರ್ಥಕ, ಸಂಖ್ಯಾವಾಚಗಳ ಉಲ್ಲೇಖ ಮರಾಠಿ ವ್ಯಾಕರಣದಲ್ಲಿ ಕಂಡು ಬರುವುದಿಲ್ಲ ಕರಾಡಿಯಲ್ಲಿ ಇವೆಲ್ಲ ಇವೆ. ವಿಶೇಷವಾಗಿ ಮರಾಠಿ ಯಾ ಕೊಂಕಣಿಗಳಲ್ಲಿಲ್ಲದ ಪ್ರೇರಣಾರ್ಥಕ ಕ್ರಿಯೆ ಹಿಂದಿಯಂತೆ ಕರಾಡಿಯಲ್ಲಿದೆ.

೧. ಕೊಂಕಣಿಯಲ್ಲಿ ಪ್ರತಿಶತ ಎಂಬತ್ತರಷ್ಟು ಸಂಸ್ಕೃತ ಶಬ್ದಗಳಿವೆಯೆಂದು ಹೇಳುತ್ತಾರೆ ಆದರೆ ಕೊಂಕಣಿಗಿಂತ ಹೆಚ್ಚು ಕರಾಡಿಯು ಸಂಸ್ಕೃತ ಪ್ರಾಕೃತ ಶಬ್ದಗಳನ್ನು ಹೊಂದಿದ್ದು ಹೆಚ್ಚು ವಿಕಾರ ವಿಲ್ಲದೆ ಉಳಿಸಿ ಕೊಂಡಿದೆ ಹೆಚ್ಚಾಗಿ ಕನ್ನಡ ಶಬ್ದಗಳು ಕರಾಡಿಯಲ್ಲಿದೆ ಎಂಬ ಭ್ರಮೆ ಉಂಟಾಗುತ್ತದೆ ಆದರೆ ಕನ್ನಡ ಯಾವುದು? ಕರಾಡಿ ಯಾವುದು ? ಎಂದು ಗುರುತಿಸುವುದು ಸುಲಭವಲ್ಲ

೨. ಕರಾಡ ಬ್ರಾಹ್ಮಣರು ಹೋಮ ಹವನ ಪೂಜೆ ಪುರಸ್ಕಾರ ವೇದ ವೇದಾಂಗಾಧ್ಯಯಸವೇ ಮೊದಲಾದ ಬ್ರಾಹ್ಮಣಧರ್ಮಾಚರಣೆಯನ್ನು ನಿರಂತರ ಮಾಡಿಕೊಂಡು ಬಂದಿರುವುದರಿಂದ ಕರಾಡಿಯು ಸಂಸ್ಕೃತಸಂಪನ್ನವಾಗಲು ಕಾರಣವೆಂದು ಹೇಳಬಹುದು

ಗೋವದಲ್ಲಿ ಬ್ರಾಹ್ಮಣರು ಮಾತಾಡುತ್ತಿದ್ದ ಸಂಸ್ಕೃತ ಭೂಯಿಷ್ಠವಾದ ಕೊಂಕಣಿಯನ್ನು ಬ್ರಾಹ್ಮಣಿ ಎಂದು ಬೇರೆಯವರು ಕರೆಯುತ್ತಿದ್ದರೆಂಬ ಉಲ್ಲೇಖವಿದೆ ಆ "ಬ್ರಾಹ್ಮಣಿ"ಯೇ ಕರಾಡಿಯಾಗಿರುವ ಸಾಧ್ಯತೆಯೇ ಹೆಚ್ಚು ಆದರೆ ಇದರ ಮೂಲ ಗೋವೆಯಲ್ಲ ಗೋದಾವರಿ ತೀರವೇ ಆಗಿ ಇರಬೇಕು.

ಪ್ರಾಕೃತದ ಶೌರಸೇನಿಯಿಂದ ಕೊಂಕಣಿ ಹುಟ್ಟಿತೆಂದು ಹೇಳುತ್ತಾರೆ ಹಾಗೆಯೇ ಕರಾಡಿಯೂ ಶೌರಸೇನಿಯಿಂದಲೇ ಹುಟ್ಟಿದ ಇನ್ನೊಂದು ಕವಲಾಗಿದೆ ಕರಾಡಿಯು ಪ್ರಾಕೃತ ಸಂಸ್ಕೃತ ವ್ಯಾಕರಣ ನಿಯಮವನ್ನು ಅನುಸರಿಸಿದೆ. ಮರಾಠಿ ಕೊಂಕಣಿಗಳು ಅನುಸರಿಸಿಲ್ಲ.

ಟಿಪ್ಪಣಿ:

೧. ಶಂ.ಬಾ. ಜೋಷಿ, ಹಾಲುಮತ ದರ್ಶನ

೨. ಕರಹಟದೊಳ್ ಬೇಂಟೆಯ ಕುಕ್ಕುರಿಯಾದಳ್ ಸತ್ತು ಚಂದ್ರಮತಿಯುಂ :೩-೩೬, ಪು : ೨೦
ಕ್ರಿ. ಶ. ೧೨೦೯ ರಲ್ಲಿ 'ಯಶೋಧರ ಚರಿತೆ' ಯನ್ನು ಬರೆದ ಜನ್ನ ಕವಿ ಜೈನಧರ್ಮದವನು. ಈ ಕಾಲ ಘಟ್ಟದಲ್ಲಿ ಕರಹಾಟಕವನ್ನು ಆಳುತ್ತಿದ್ದ ಶಿಲಾಹಾರರು ಜೈನಧರ್ಮದ ಬಗ್ಗೆ ಒಲವು ಉಳ್ಳವರಾಗಿದ್ದರೆಂದು ಜಿ.ಆರ್. ಭಂಡಾರ್‌ಕರ್ ಅವರು ತಮ್ಮ Early History of Deccan ಕೃತಿಯ 124ನೇ ಪುಟದಲ್ಲಿ ಉಲ್ಲೇಖಿಸಿದ್ದಾರೆ. (ಕಾಸರಗೋಡಿನ ಕರಾಡ ಉಪಭಾಷೆ 2001, ರಾಧಾಕೃಷ್ಣ ಬೆಳ್ಳೂರು) ಪುಟ : 7

* * *

# ಅಧ್ಯಾಯ – ೪

## ಮೌಖಿಕ ಪರಂಪರೆಯಲ್ಲಿ ಕರ್‍ನಾಡ ಭಾಷಾ ಸಾಹಿತ್ಯ

ಅಧ್ಯಾಯ –೪

# ಮೌಖಿಕ ಪರಂಪರೆಯಲ್ಲಿ ಕರ್ವಾಡ ಭಾಷಾ ಸಾಹಿತ್ಯ

## ೪.೧ ಮೌಖಿಕ ಪರಂಪರೆಯಲ್ಲಿ ಕರ್ವಾಡ ಭಾಷಾ ಸಾಹಿತ್ಯ

'ಸಮಾಜದ ಪ್ರತಿಬಿಂಬ ಸಾಹಿತ್ಯ' – ಎನ್ನುವ ಒಂದು ಮಾತಿದೆ. ಒಂದು ಸಮಾಜ ಅಥವಾ ಸಮುದಾಯದಲ್ಲಿ ಸಾಹಿತ್ಯ, ಸಂಗೀತ, ನೃತ್ಯ ಮುಂತಾದ ಕಲೆಗಳು ಬೆಳೆಯಬೇಕಾದರೆ ಆ ಸಮುದಾಯದಲ್ಲಿ ಅದಕ್ಕೆ ಅನುಕೂಲಕರವಾದ ವಾತಾವರಣ ದೊರೆಯಬೇಕು. ಆ ಸಮುದಾಯ ಸುಖ ಸಮೃದ್ಧಿಗಳಿಂದ ಕೂಡಿದಾಗ ಮಾತ್ರ ಅಂತಹ ವಾತಾವರಣ ನಿರ್ಮಾಣವಾಗಿ ಪ್ರತಿಭೆಗಳು ಅರಳುತ್ತವೆ ಎಂಬುದು ಐತಿಹಾಸಿಕ ಸತ್ಯ. ಈ ದೃಷ್ಟಿಯಿಂದ ಅವಲೋಕಿಸಿದಾಗ ಯಾವುದೋ ಐತಿಹಾಸಿಕ ಒತ್ತಡಗಳಿಂದ ತಮ್ಮ ಹುಟ್ಟೂರಲ್ಲೇ ಇರಲು ಸಾಧ್ಯವಾಗದೇ ಉತ್ತರದ ಕರ್ವಾಡ, ಗೋವಾ, ಮಹಾರಾಷ್ಟ್ರ ಮುಂತಾದ ಪ್ರದೇಶಗಳಿಂದ ಸಾಮೂಹಿಕವಾಗಿ ವಲಸೆ ಬಂದ ಕರ್ವಾಡರು ಉತ್ತರಕನ್ನಡ, ದಕ್ಷಿಣ ಕನ್ನಡ ಮತ್ತು ಕಾಸರಗೋಡು ಜಿಲ್ಲೆಗಳಲ್ಲಿ ನೆಲೆಸಿದ್ದಾರೆ. ಇವರು ತಮ್ಮ ಆತ್ಮ ಸಂತೋಷಕ್ಕಾಗಿಯೋ ಅಥವಾ ಅವಶ್ಯಕತೆಯನ್ನರಿತೋ ತಮ್ಮ ಅಭಿರುಚಿಗೆ ತಕ್ಕಂತೆ ಸಾಹಿತ್ಯ ರಚನೆಗೆ ಕೈಹಾಕಿದರು. ದಿ। ಪಡ್ರೆ ಶ್ರೀಪತಿ ಶಾಸ್ತ್ರಿಗಳು ಮೊಟ್ಟಮೊದಲಿಗೆ ಕರ್ವಾಡ ಭಾಷೆಯಲ್ಲಿ ಸಾಹಿತ್ಯ ರಚನೆ ಸಾಧ್ಯವೇ ಎಂದು ಪ್ರಯತ್ನಿಸಿ ನೋಡಿದ್ದಾರೆ.

ಕರ್ವಾಡ ಭಾಷೆಯ ಸಾಹಿತ್ಯವನ್ನು ಜನಪದ ಸಾಹಿತ್ಯ ಮತ್ತು ಶಿಷ್ಟ ಸಾಹಿತ್ಯವೆಂದು ಅಧ್ಯಯನದ, ದೃಷ್ಟಿಯಿಂದ ಪ್ರತ್ಯೇಕಿಸಲಾಗಿದೆ. ಶಿಷ್ಟ ಸಾಹಿತ್ಯ ಬಾಯ್ದೆರೆಯಾಗಿ ಬಂದುದಾದರೂ ಅದು ಕರ್ವಾಡ ಸ್ಮರಣ ಸಂಚಿಕೆ ೧೯೮೬ ರಲ್ಲಿ ಲಿಖಿತ ರೂಪವನ್ನು ಕಂಡಿದೆ. ಅಲಿಖಿತ ರೂಪದ ಮೌಖಿಕ ಸಾಹಿತ್ಯದಲ್ಲಿ ಗಾದೆ ಮಾತುಗಳು, ಒಗಟುಗಳು, ಜಾನಪದ ಕತೆಗಳು, ಶಿಶು ಗೀತೆಗಳೂ, ಇತ್ಯಾದಿಗಳನ್ನು ಅಧ್ಯಯನ ಮಾಡಲಾಗಿದೆ.

### ೪.೧.೧. ಮೌಖಿಕ ಸಾಹಿತ್ಯ:

ಅಕ್ಷರ ಜ್ಞಾನವಿಲ್ಲದ ಜನಸಮೂಹ ತಮ್ಮ ಅಗತ್ಯಗಳಿಗೆ ತಕ್ಕಂತೆ ಸೃಷ್ಟಿಸಿಕೊಂಡಿರುವ ಸಾಹಿತ್ಯವೇ ಮೌಖಿಕ ಸಾಹಿತ್ಯ. ಮೌಖಿಕ ಸಾಹಿತ್ಯದ ಚರಿತ್ರೆಯನ್ನು ಗುರುತಿಸುವುದು ಕಷ್ಟ. ಹಾಡು, ಕಥೆ, ಒಗಟು, ಗಾದೆ ಇವೆಲ್ಲ ಮೌಖಿಕ ಸಾಹಿತ್ಯದಲ್ಲಿ ಹೇರಳವಾಗಿ ಇದೆ.

ಒಂದು ನಾಡಿನ ಸಂಪ್ರದಾಯ, ಸಂಸ್ಕೃತಿಗಳ ಪರಿಚಯ ಆಗುವುದು "ಜನಪದ ಸಾಹಿತ್ಯ"ದಿಂದ. ಜನಪದ ಸಾಹಿತ್ಯವು ಜನಜೀವನದ ರಮ್ಯ ಚಿತ್ರ, ಜನಜೀವನದ ರಸವಾಣಿ"[೧]. ಜನಪದ ಸಾಹಿತ್ಯವು ಒಂದು ನಾಡಿನ ಜನರ ಅಂತರಂಗದ ಅನುಭವಗಳಾಗಿವೆ.

೪.೧.೨. ಕರ್ವಾಡ ಭಾಷೆಯ ಮೌಖಿಕ ಸಾಹಿತ್ಯ: ಕರ್ವಾಡ ಭಾಷೆಯ ಮೌಖಿಕ ಸಾಹಿತ್ಯದಲ್ಲಿ ಹಿರಿಯರಿಂದ ಕೇಳಿ ಸಂಗ್ರಹಿಸಿದ ಗಾದೆಗಳು, ಒಗಟುಗಳು, ಕಥೆಗಳು, ಶಿಶುಗೀತೆಗಳು, ನಂಬಿಕೆಗಳು, ಸಂಪ್ರದಾಯ ಇತ್ಯಾದಿಗಳನ್ನು ಅಧ್ಯಯನ ಮಾಡಲಾಗಿದೆ.

೪.೨. ಗಾದೆಗಳು : ಜನಪದ ಸಾಹಿತ್ಯ ಪ್ರಕಾರಗಳಲ್ಲೆಲ್ಲಾ ಗಾದೆ ಅತ್ಯಂತ ಜನಪ್ರಿಯವಾದ ಪ್ರಕಾರವಾಗಿದೆ. ಮಾನವ ಸಮಾಜದಲ್ಲಿ ಬಹಳಷ್ಟು ಪ್ರಯೋಜನಕಾರಿಯಾದ ಸಾಹಿತ್ಯ ಪ್ರಕಾರ ಇದಾಗಿದೆ.

ಒಂದು ಜನಾಂಗದ ಅನುಭವ ಸಂಪತ್ತಿಗೆ ಒಂದು ಭಾಷೆಯ ಸಾರ ಸತ್ವಗಳಿಗೆ ಅಲ್ಲಿ ಸಂಗ್ರಹಗೊಂಡಿರುವ ಗಾದೆಗಳ 'ನಿಧಿಯೇ' ಸಾಕ್ಷಿಯಾಗಿರುತ್ತದೆ.

'ಗಾದೆಗಳು ವೇದಕ್ಕೆ ಸಮ' ಎನ್ನುವ ಮಾತಿದೆ. ಕಾಲಚಕ್ರದಲ್ಲಿ ಸಮಾಜ ಬದಲಾದಂತೆ ವೇದ ಹಳತಾಗುತ್ತದೆ. ಗಾದೆಗಳಾದರೆ ಬಳಸಿದಷ್ಟು ಹೊಳಪನ್ನು ಹೊಂದುತ್ತದೆ. ಗಾದೆಗಳಿಗೆ ಅರ್ಥವಿಲ್ಲದಿದ್ದರೆ ಅವುಗಳು ಬೇಗನೆ ಕಣ್ಮರೆಯಾಗುತ್ತವೆ. ಅವುಗಳ ಹಿಂದಿರುವ ಸಾಮಾಜಿಕ ಅನುಭವ ದ್ರವ್ಯ ಅಧ್ಯಯನ ಯೋಗ್ಯ ವಿಚಾರ. ಅನುಭವ ದ್ರವ್ಯ ಒಂದೇ ಆದರೂ ಅವುಗಳ ಭಾಷಿಕ ರಚನೆಗಳು ಭಿನ್ನವಾಗಿರಲು ಸಾಧ್ಯ. ಇಂತಹ ಭಿನ್ನ ನೆಲೆಗಳೇ ಸಂಸ್ಕೃತಿಯೊಂದರ ಅನನ್ಯತೆಯ ಭಾಗವಾಗಿ ರೂಪು ಗೊಳ್ಳಬಹುದು.

ಗಾದೆಗಳೂ ಒಂದು ಕಡೆಯಿಂದ ಇನ್ನೊಂದು ಕಡೆಗೆ ಸಂಚಾರ ಮಾಡಬಹುದು. ಮಾನವ ಒಂದು ಕಡೆಯಿಂದ ಇನ್ನೊಂದು ಕಡೆಗೆ ವಲಸೆ ಹೋದಾಗ ಭಾಷೆ ಬಾಷೆಗಳ ನಡುವೆ ರಾಜ್ಯ ರಾಜ್ಯಗಳ ನಡುವೆ ಗಾದೆಗಳಲ್ಲೂ ಕೊಳು ಕೊಡೆ ನಡೆಯುವ ಸಾಧ್ಯತೆ ಇದೆ. ದಕ್ಷಿಣ ಭಾರತದ ಭಾಷೆಗಳಲ್ಲಿ ಕಂಡು ಬರುವ ಗಾದೆಗಳಲ್ಲೆಲ್ಲಾ ಪರಸ್ಪರ ಹೋಲಿಕೆ ಇದೆ. ಹೋಲಿಕೆ ಇದ್ದ ಮಾತ್ರಕ್ಕೆ ಅವು ಒಂದರ ಪ್ರತಿರೂಪ ಮತ್ತೊಂದು ಎನ್ನುವಂತಿಲ್ಲ.

ಅನೇಕ ಗಾದೆಗಳ ಹಿನ್ನೆಲೆಯಲ್ಲಿ ಯಾವುದೊ ಒಂದು ಕಥೆ, ಘಟನೆ ಅಥವಾ ಪ್ರಸಂಗ ಇರುತ್ತದೆ. ಹಿನ್ನೆಲೆಯ ಪ್ರಸಂಗ ತಿಳಿದಾಗ ಆಯಾ ಗಾದೆಯ ಮಹತ್ವ ತಿಳಿಯುತ್ತದೆ.

ಗಾದೆಗಳಿಗೂ ಛಂದೋಬದ್ಧ ವೃತ್ತದಿಂದ ಕೂಡಿದ ವಾಕ್ಯಗಳಿಗೂ ಕೆಲವು ಕಡೆಗಳಲ್ಲಿ ಹತ್ತಿರದ ಸಂಬಂಧವು ಕಂಡುಬರುವುದರಿಂದ ಗಾದೆಗಳಿಂದಲೇ ಕವಿತೆಗಳು (ಗರತಿಯ ಹಾಡುಗಳು ಹಾಗೂ ಸರ್ವಜ್ಞನ ವಚನಗಳು) ಅಥವಾ ಈ ಬಗೆಯ ಕವಿತೆಗಳಿಂದಲೇ ಗಾದೆಗಳು ಹುಟ್ಟಿರಬೇಕೆಂತಲೂ ಊಹಿಸುತ್ತಾರೆ.

"ಸರ್ವಜ್ಞನು ಗಾದೆಗಳನ್ನು (ಅಡಿಯ ಮುಂದಿಡೆ ಸ್ವರ್ಗ ಅಡಿಯ ಹಿಂದಿಡೆ ನರಕ) ಹೊಸೆದು ತ್ರಿಪದಿಗಳನ್ನು ಬರೆದನೋ ಅಥವಾ ತ್ರಿಪದಿಗಳೇ ಗಾದೆಗಳಾಗಿ ಪರಿಣಮಿಸಿದವೋ ಊಹಿಸಲು ಅಸಾಧ್ಯವಾಗಿದೆ" ಎಂದು ಶಂಬಾ ಜೋಷಿಯವರು ಅಭಿಪ್ರಾಯ ಪಡುತ್ತಾರೆ.[9]

ಒಂದು ಸಮುದಾಯದ ಅನುಭವದ ಮಾತುಗಳು ಪ್ರಭಾವಶಾಲಿಯಾಗಿರುವಾಗ ಜನ ಸಮುದಾಯ ಅವುಗಳನ್ನು ಮತ್ತೆ ಮತ್ತೆ ಕೇಳ ಬೇಕೆಂದು ಬಯಸುತ್ತದೆ. ಆ ಮಾತುಗಳಿಂದ ತಮ್ಮ ನಡೆನುಡಿಯನ್ನು ಸುಧಾರಿಸಿ ಪ್ರಯತ್ನವು ಹುಟ್ಟಿ ಕೊಳ್ಳುತ್ತದೆ. ಹೀಗೆ ಕಾಲಕಾಲಕ್ಕೆ ಹುಟ್ಟಿದ ಅನುಭವೋಕ್ತಿಗಳು ಸಮಾಜದಲ್ಲಿ ಪ್ರಸಾರವಾಗತೊಡಗುತ್ತವೆ. ಇವುಗಳು ಅನೇಕ ವ್ಯಕ್ತಿಗಳ ಅನುಭವದಿಂದ ತುಂಬಿದ ಸಾರವತ್ತಾದ ವಾಕ್ಯಗಳಾಗಿರುತ್ತವೆ. ಇವುಗಳಿಗೆಲ್ಲ ಮೂಲ ಅನುಭವವೇ ಆಗಿದೆ. ಇಂಥ ಅನುಭವಗಳಿಗೆ ಗಾದೆಯ ಸ್ವರೂಪ ಕೊಡಬೇಕಾದರೆ ಸೂತ್ರ ರೂಪವಾಗಿ ಚಿಕ್ಕ ವಾಕ್ಯಗಳಲ್ಲಿದ್ದು ಅರ್ಥ ಗಂಭೀರವಾಗಿರ ಬೇಕಾಗುತ್ತದೆ.

ಚಿಕ್ಕ ವಾಕ್ಯಗಳು ಪ್ರಾಸಯುಕ್ತವಾಗಿದ್ದು ಅಲಂಕಾರದಿಂದ ಕೂಡಿದ್ದರೆ ಸುಂದರ ಗಾದೆಗಳಾಗುತ್ತದೆ. ಕೇಳುಗರ ಕುತೂಹಲವನ್ನು ಕೆರಳಿಸುತ್ತದೆ. ಹೇಳುವವನಲ್ಲಿ ಆಸಕ್ತಿಯನ್ನು ಹೆಚ್ಚಿಸುತ್ತದೆ. ಒಟ್ಟಿನಲ್ಲಿ ಗಾದೆಗಳಲ್ಲಿ ಪ್ರಸಿದ್ಧಾರ್ಥಕ್ಕಿಂತ ಗೂಡಾರ್ಥ ಅಥವಾ ವ್ಯಾಪಕಾರ್ಥ ಮುಖ್ಯವಾಗಿದೆ.

೪.೨.೧ ಕರ್‍ನಾಡ ಭಾಷೆಯ ಗಾದೆಗಳು :

ಎಲ್ಲ ಭಾಷೆಗಳೂ ತಮ್ಮದೇ ಆದ ಗಾದೆಗಳಿಂದ ಸಮೃದ್ಧವಾಗಿದೆ. ಜೀವನದ ಅನುಭವದ ಸಾರ ಪ್ರತಿಯೊಂದು ಗಾದೆ ಮಾತಿನಲ್ಲಿಯೂ ಇದೆ. ಆದರೆ ಆಧುನಿಕ ಸಮಾಜದಲ್ಲಿ ಈ ಗಾದೆಗಳ ಉಪಯೋಗ ದಿನದಿಂದ ದಿನಕ್ಕೆ ಕಡಿಮೆಯಾಗುತ್ತಿದೆ. ಹಳೆಯ ಕಾಲದ ಅನುಭವವುಳ್ಳ ಮುದುಕರು ಮಾತ್ರ ಇವುಗಳನ್ನು ತಮ್ಮ ಮಾತುಗಳಲ್ಲಿ ಬಳಸುತ್ತಿದ್ದಾರೆ ಎಂದು ಹೇಳ ಬಹುದು. ಗಾದೆಗಳಲ್ಲಿರುವ ರೂಪಕ ಶಕ್ತಿ ಸಂವಹನ ಕ್ರಿಯೆಯನ್ನು ಅತ್ಯಂತ ಪರಿಣಾಮಕಾರಿಯಾಗಿಸಬಲ್ಲದು.

ಪ್ರಪಂಚದ ಎಲ್ಲ ಭಾಷೆಗಳಲ್ಲೂ ಗಾದೆಗಳು ಹೇರಳವಾಗಿದೆ. ನೂರಾರು ಮಂದಿ ಮಾತನಾಡುವ ಕ್ಷುಲ್ಲಕ ಭಾಷ್ಣೆಗಳಲ್ಲಿಯೂ ಗಾದೆಗಳಿವೆ. ಜಾನಪದದ ಅನುಭವದ ಕೆನೆಯಾಗಿ ಬಂದ ಗಾದೆಗಳು ಕರ್‍ನಾಡ ಭಾಷೆಯಲ್ಲೂ ಸಾಕಷ್ಟು ಇದೆ. ಕರ್‍ನಾಡರ ಬದುಕಿನ ಅವಿಭಾಜ್ಯ ಅಂಗವಾಗಿ ಗಾದೆಗಳು ಬರುವುದನ್ನು ಕಾಣ ಬಹುದು. ಗಾದೆಗಳಲ್ಲಿ ಕೆಲವು ಕನ್ನಡ, ತುಳು, ಮಲೆಯಾಳಗಳಿಂದ ಅನುಕರಣ ಗೊಂಡವುಗಳಾದರೆ ಮತ್ತೆ ಕೆಲವು ಸ್ವತಂತ್ರ ಗಾದೆಗಳೂ ಕರ್‍ನಾಡ ಭಾಷೆಯಲ್ಲಿದೆ.

"ತೀಳ ಖೌವುನು ವೃತ ಹಾಳಕರಪ" (ಎಳ್ಳು ತಿಂದು ವೃತ ಹಾಳು ಮಾಡುವುದು)

ವಿಶ್ಲೇಷಣೆ : ವೃತಾಚರಣೆ ಎಲ್ಲಾ ಜನಾಂಗಗಳಲ್ಲೂ ರೂಢಿಯಲ್ಲಿದೆ. ಕರ್‍ನಾಡರೂ ಕಟ್ಟುನಿಟ್ಟಿನ ವೃತಾಚರಣೆಯನ್ನು ಆಚರಿಸುತ್ತಾರೆ. ವೃತಗಳ ಪ್ರಾಮುಖ್ಯವನ್ನು ಅರಿತ ಅವರ ಸಂಸ್ಕೃತಿಯಲ್ಲಿ ಈ ಗಾದೆ ಮಾತು ಸರಳವಾಗಿ ಸಹಜವೆನ್ನುವಂತೆ ಬಂದಿದೆ. ಇಡೀ ದಿನ ಅನ್ನಾಹಾರಗಳನ್ನು ಸ್ವೀಕರಿಸದೆ ಉಪವಾಸವಿದ್ದು ವೃತಾಚರಣೆಯನ್ನು ಮಾಡಿದವನು ಕೊನೆಗೆ ಎಳ್ಳು ತಿಂದರೆ ವೃತ ಭಂಗವಾಗುತ್ತದೆ. ಎಳ್ಳು ಹೆಚ್ಚಾಗಿ ಅಮಂಗಳ ಕಾರ್ಯಗಳಲ್ಲಿ ಬಳಕೆಯಾಗುತ್ತಿದೆ. ಮಂಗಳ ಕಾರ್ಯಕ್ಕೆ ಎಳ್ಳಿನ ಅವಶ್ಯಕತೆ ಇಲ್ಲ. ವೃತ ಒಂದು ಮಂಗಳ ಕಾರ್ಯ, ವೃತಾಚರಣೆಯ ಸಂದರ್ಭದಲ್ಲಿ ಎಳ್ಳು ತ್ಯಾಜ್ಯ ವಸ್ತುವಾಗುತ್ತದೆ. ಎಳ್ಳನ್ನು ತಿನ್ನುವಂತಿಲ್ಲ. ತಿಂದರೂ ಹಸಿವೆ ನೀಗುವಂತಿಲ್ಲ. ಈ ಗಾದೆಯ ಮೇಲ್ನೋಟದ ಅರ್ಥ ಇದಾದರೆ ಗೂಡಾರ್ಥ ಇನ್ನೊಂದಿದೆ. ಒಳ್ಳೆಯ ಒಂದು ಕೆಲಸ ಮಾಡಿ, ಕೊನೆಗೆ ಒಂದು ಸಣ್ಣ ತಪ್ಪಿನಿಂದ ಮಾಡಿದ ಒಳ್ಳೆ ಕಾರ್ಯ ಕೆಟ್ಟು ಹೋದರೆ ಅದರಿಂದ ಸತ್ಫಲ ಸಿಗುವುದಿಲ್ಲ. ಅಲ್ಪತನಕ್ಕೆ ಹೋಗಿ ಉತ್ತಮವಾದ ಸದಾವಕಾಶವನ್ನು ಕಳ ಕೊಳ್ಳಬಾರದು ಎಂಬುದೇ ಈ ಗಾದೆಯ ಮಾತಿನ ತಾತ್ಪರ್ಯ. ನೊಣ ತಿಂದು ಜಾತಿ ಕೆಡುವುದು ಎಂಬ ಕನ್ನಡ ಗಾದೆಗೆ ಸಮನಾದ ಗಾದೆ ಇದು.

"ಘರಾಶಿಲೆ ಹೊಳ್ಳ ಸವಣದೌನಯ್ಯೆ" (ಮನೆಗಿಂತ ಮೆಟ್ಟಲು ದೊಡ್ಡದು ಇರಬಾರದು)

ವಿಶ್ಲೇಷಣೆ: ಗಾದೆ ಮಾತಿನಲ್ಲಿ ವಿಶಾಲವಾದ ಅರ್ಥ ಅಡಗಿದೆ. ಮನೆಗಿಂತ ಮೆಟ್ಟಿಲು ಎಲ್ಲೂ ದೊಡ್ಡದಿರುವುದಿಲ್ಲ. ಮನೆ ಕಟ್ಟುವಾಗ ಮೆಟ್ಟಲಿಗೂ ಪ್ರಾಮುಖ್ಯ ಇದ್ದೇ ಇರುತ್ತದೆ. ಮೆಟ್ಟಲಿಲ್ಲದ ಮನೆಗಳೇ ಇಲ್ಲ ಎನ್ನ ಬಹುದು. ಮನೆಗೆ ಹೊಂದಿಕೆಯಾಗುವಂತೆ ವ್ಯವಸ್ಥಿತವಾಗಿ ಇತಿಮಿತಿಯೊಳಗೆ ಮೆಟ್ಟಲಿದ್ದರೆ ಅದರ ಸದುಪಯೋಗವಾಗುತ್ತದೆ. ಅವ್ಯವಸ್ಥೆಯ ಮೆಟ್ಟಲಿದ್ದರೆ ಅದರಿಂದ ತೊಂದರೆಗಳೇ ಜಾಸ್ತಿ. ಉಪಯೋಗಕ್ಕಿಲ್ಲದ ಮೆಟ್ಟಲು ಇದ್ದೂ ಇಲ್ಲದಂತೆ. ಅದೇ ರೀತಿಯಲ್ಲಿ ಮನೆಯ ಯಜಮಾನನಿಗಿಂತಲೂ ದೊಡ್ಡಸ್ತಿಕೆಯ ನೌಕರನಿದ್ದರೆ ಅದರಿಂದ ಕೆಡುಕಲ್ಲದೆ ಒಳಿತು ಉಂಟಾಗದು, ಪ್ರತಿಯೊಂದು ವ್ಯವಸ್ಥಿತವಾಗಿದ್ದರೆ

ಅದರಿಂದ ಉಪಯೋಗ. ಅವ್ಯವಸ್ಥೆಯೇ ವ್ಯವಸ್ಥೆಯಾಗಬಾರದು. "ಮೂಗಿಗಿಂತ ಮೂಗುತಿ ದೊಡ್ಡದಾಗ ಬಾರದು" ಎಂಬ ಕನ್ನಡ ಗಾದೆಗೆ ಸಮ ಎನ್ನುವುದೇ ಈ ಗಾದೆ ಮಾತಿನ ಅರ್ಥವಾಗಿದೆ.

"ಹತ್ತಾಂಟು ಪಳ್ಳ ವೆಂಚಿಯೇದ, ತೊಂಡಾಂಟು ಪಳ್ಳ ವೆಂಚಾನಜ್ಜ"

(ಕೈಯಿಂದ ಬಿದ್ದುದನ್ನು ಹೆಕ್ಕಬಹುದು, ಬಾಯಿಯಿಂದ ಬಿದ್ದುದನ್ನು ಹೆಕ್ಕಲಾಗುವುದಿಲ್ಲ. )

ವಿಶ್ಲೇಷಣೆ: "ಮಾತು ಆಡಿದರೆ ಹೋಯ್ತು ಮುತ್ತು ಒಡೆದರೆ ಹೋಯ್ತು' ಎನ್ನುವ ಕನ್ನಡ ಗಾದೆಯನ್ನು ನೆನಪಿಗೆ ತರುವ ಗಾದೆ ಮಾತು ಇದಾಗಿದೆ. ಕೈಯಿಂದ ಏನೇ ಬಿದ್ದರೂ ಅದನ್ನು ಹೆಕ್ಕ ಬಹುದು. ಆದರೆ ಬಾಯಿಯಿಂದ ಬಿದ್ದ ಮಾತನ್ನು ಹೆಕ್ಕುವ ಹಾಗಿಲ್ಲ. ಮಾತನಾಡುವಾಗ ಜಾಗರೂಕತೆ ಅತೀ ಅಗತ್ಯ. ನಮ್ಮ ಮಾತಿನಿಂದ ಇನ್ನೊಬ್ಬರಿಗೆ ನೋವಾಗಬಾರದು "ಮಾತಿನಿಂದ ನಗೆನುಡಿ ಮಾತಿನಿಂದ ಹಗೆ ಕೊಲೆ, ಮಾತಿನಿಂದಲೇ ಸರ್ವ ಸಂಪತ್ತು"– ಎಂದು ಸರ್ವಜ್ಞ ಲೋಕಕ್ಕೆ ಮಾತಿನ ಮಹತ್ವವನ್ನು ತಿಳಿಸಿದ್ದಾನೆ. ಆದ್ದರಿಂದಲೇ ಮಾತು ಮಾಣಿಕ್ಯ. ಮಾತು ಯಾವತ್ತೂ ತೂಕದ್ದಾಗಿರಬೇಕು. ಮಾತನಾಡುವಾಗ ಪರಿಸ್ಥಿತಿ, ಸನ್ನಿವೇಶ, ಸಮಯ ಪ್ರಜ್ಞೆಗಳನ್ನು ಅರಿತು ಮಾತನಾಡಬೇಕು. ಆಗ ನಮ್ಮ ಕಾರ್ಯ ವ್ಯವಸ್ಥಿತವಾಗಿ ಆಗುತ್ತದೆ. ಮಾತಿಗೆ ಬೆಲೆಯೂ ಸಿಗುತ್ತದೆ.

"ತೆರೊ ರಭ್ಸುನು ಸಮುದ್ರು ನ್ವಯಾಕನಾ" (ತೆರೆ ನಿಂತು ಸಮುದ್ರ ಸ್ನಾನ ಮಾಡಲಿಕ್ಕೆ ಇಲ್ಲ)

ವಿಶ್ಲೇಷಣೆ : ಸಮುದ್ರ ಸ್ನಾನ ಮಾಡಲು ಯೋಚಿಸಿದವನು ತೆರೆಯ ಬಗ್ಗೆ ಚಿಂತಿಸುವುದಿಲ್ಲ. ತೆರೆಗಳು ಸಮುದ್ರದಲ್ಲಿ ಬರದೆ ಇನ್ನೆಲ್ಲಿ ಬರಲು ಸಾಧ್ಯ. ಅದೊಂದು ಸಮುದ್ರದಲ್ಲಿ ನಡೆಯುವ ನೈಸರ್ಗಿಕ ಸಹಜ ಕ್ರಿಯೆ. ಅದೇ ರೀತಿಯಲ್ಲಿ ಕೆಲಸವೊಂದನ್ನು ಮಾಡಲು ನಿರ್ಧರಿಸಿದವನು. ಆ ಕೆಲಸವನ್ನು ಕಾಲಕ್ಕೆ ಸರಿಯಾಗಿ ಮಾಡಿ ಮುಗಿಸಬೇಕು. ಯಾವುದನ್ನು ನಾಳಗೆ ಇಡದೆ ಇಂದೇ ಪೂರ್ತಿ ಗೊಳಿಸಬೇಕು. ನಾಳೆಗಿಟ್ಟರೆ ಅದು ಇನ್ನಷ್ಟು ಕಷ್ಟವಾಗುತ್ತದೆ. ಕರ್ತವ್ಯ ಪ್ರಜ್ಞೆ ಸದಾ ಜಾಗೃತವಾಗಿರಬೇಕು ಎನ್ನುವ ಅಂಶ ಈ ಗಾದೆ ಮಾತಿನಲ್ಲಿದೆ. ನಡೆವರೆಡಹದೆ ಕುಳಿತವರೆಡುಹವರೇ? ಎಂಬ ಹರಿಶ್ಚಂದ್ರ ಕಾವ್ಯದ ಮಾತಿಗೆ ಸಮ.

"ವೆಂಟಿ ಪಯಾಕ ಗೋರ್ವಾ ಬಂದುನು ಐಲೊಟ್ಟ" (ಕೆಸುವಿನ ದಂಟಿಗೆ ದನವನ್ನು ಕಟ್ಟಿ ಬಂದಿದ್ದಾನೆ)

ಕೆಸಿನದಂಟಿಗೆ ಕರುಕಟ್ಟಿ ಬಂದಿದ್ದ ಎನ್ನುವ ಗಾದೆಗೆ ಇದು ಸಮನಾಗಿದೆ.

ಪುರುಸೊತ್ತಿಲ್ಲದ ವ್ಯಕ್ತಿಯನ್ನುದ್ದೇಶಿಸಿ ಆಡುವ ಗಾದೆ ಮಾತು ಇದಾಗಿದೆ.

"ಕುಂಬಳೆ ಲೋಣಾ ಗೆಲ್ಲಲೋ ಪೆರಂಜೆ ಮ್ಹಾಳಾ ಪತ್ತಲೊ"

ಗಣಪತಿ ಮಾಡಹೋಗಿ ಹನುಂತನ ಮಾಡದ್ಹಂಗೆ ಎನ್ನುವ ಗಾದೆ ಈ ಸಂದರ್ಭದಲ್ಲಿ ನೆನಪಿಗೆ ಬರುತ್ತದೆ.

(ಕುಂಬಳೆಗೆ ಉಪ್ಪು ತರಲು ಹೋದವ ಪೆರಂಜೆಯ ಮಹಾಲಯಕ್ಕೆ ತಲಪಿದ). ಒಂದು ಹೇಳಿದರೆ ಮತ್ತೊಂದನ್ನು ಮಾಡಿ ಬರುವುದನ್ನು ವ್ಯಂಗ್ಯವಾಗಿ ಸೂಚಿಸುವ ಅರ್ಥವನ್ನು ಇದು ನೀಡುತ್ತದೆ.

"ಅಣೆಕ್ಕಾಚ ಗಂಡೀರಿ ನಾರ್ಲು ಭೆತ್ತುನು ದೀಸು ಕಡ್ಡಪ"

(ಇನ್ನೊಬ್ಬನ ಕುಂಡೆಗೆ ತೆಂಗಿನಕಾಯಿ ಒಡೆದು ದಿನ ತೆಗೆಯುವುದು)

ತಾನು ಕಷ್ಟ ಪಡದೆ ಸೋಮಾರಿಯಾಗಿದ್ದು ಇನ್ನೊಬ್ಬನಿಂದಲೇ ಎಲ್ಲಾ ಕೆಲಸಗಳನ್ನೂ ಮಾಡಿಸಿ ಕಾಲ ಕಳೆಯುವವನ ಬದುಕನ್ನು ಈ ಗಾದೆ ಮಾತಿನಲ್ಲಿ ಟೀಕಿಸಿದೆ.

"ವೇತಿ ಶಿವಿತಣ ಹಾತಿ ಫತ್ರ" ಅಂಗೈಯಷ್ಟು ಹೊಲಿಯುವಾಗ ಮೊಳದಷ್ಟು ಹರಿಯುತ್ತದೆ

ನಿಷ್ಪ್ರಯೋಜಕವಾದ ಕೆಲಸವನ್ನು ಮಾಡಬಾರದು ಯೋಚಿಸಿ ಕೆಲಸವನ್ನು ಮಾಡಬೇಕು ಎನ್ನುವ ಅರ್ಥವನ್ನು ಇದು ಕೊಡುತ್ತದೆ.

"ತಿಸರಿ ವರ್ಸ್ಸಾ ತಿಸರಿ ಬುದ್ಧಿ" (ಮೂರನೇ ವರ್ಷಕ್ಕೆ ಮೂರನೆ ಬುದ್ಧಿ)

ಮೂರನೆಯ ವರ್ಷದಲ್ಲಿ ಮಕ್ಕಳ ಬುದ್ಧಿ ಬೇಡದ್ದೆ ಮಾಡುವುದಾಗಿರುತ್ತದೆ.

"ಅಜ್ಜಾಚ ಭೊಜ್ಜಾಕ ಕುಜ್ಜಾಸುಕ್ಕೆಂ ಅಜ್ಯೇಚ ಭೊಜ್ಜಾಕ ಬೊಂಡ್ಯೇ ಭಜ್ಜಿ"

(ಅಜ್ಜನ ಬೊಜ್ಜಕೆ ಗುಜ್ಜೆ ಪಲ್ಯ ಅಜ್ಜಿಯ ಬೊಜ್ಜಕ್ಕೆ ಬಾಳೆ ಗೊನೆಯ ತುದಿಯ ಹೂವಿನ ಭಜ್ಜಿ)

ಈ ಹೇಳಿಕೆಯ ಮಾತಿನಲ್ಲಿ ಪ್ರಾಸಕ್ಕೆ ಪ್ರಾಶಸ್ತ್ಯವಿರುವುದನ್ನು ಕಾಣ ಬಹುದು. ಇದನ್ನು ಗಾದೆ ಎಂದು ಹೇಳಲು ಅಸಾಧ್ಯ.

"ಖಿರ್ಝುರು ಪಿಕ್ಕತಣ ಕೈಳಾ ತೋಂಡರುವೊ"

(ಖರ್ಜೂರ ಹಣ್ಣಾಗುವಾಗ ಕಾಗೆಯ ಬಾಯಿಯಲ್ಲಿ ಹುಣ್ಣು ಬೇಕೆಂದಾಗ ವಸ್ತು ಸಿಗದೆ ಬೇಡವಾದಾಗ ಸಿಕ್ಕಿ ಏನು ಪ್ರಯೋಜನ ಇದು ಹಲ್ಲಿದ್ದಾಗ ಕಡಲೆ ಇಲ್ಲ ಕಡ್ಲೆ ಇದ್ದಾಗ ಹಲ್ಲಿಲ್ಲ ಎನ್ನುವ ಗಾದೆಗೆ ಸಮ.

ಇವುಗಳೆಲ್ಲ ಕರ್ಹಾಡ ಭಾಷೆಯ ಸ್ವತಂತ್ರ ಗಾದೆಗಳಾದರೆ ಅನುಕರಣ ಗಾದೆಗಳೂ ಕರ್ಹಾಡ ಭಾಷೆಯಲ್ಲಿ ಸಾಕಷ್ಟಿವೆ.

"ಭರ್ಲೆ ಬ್ರಾಹ್ಮಣ ಧೈಯ್ಯಾ ಫತ್ಥರು" (ಹೊಟ್ಟೆ ತುಂಬಿದವನಿಗೆ ಮೊಸರಲ್ಲಿ ಕಲ್ಲು)

ಈ ಗಾದೆ ಮಾತೇ ಕನ್ನಡದಲ್ಲಿ "ಒಲ್ಲದ ಗಂಡನಿಗೆ ಮೊಸರಿನಲ್ಲಿ ಕಲ್ಲು" ಎಂದು ಸ್ವಲ್ಪ ರೂಪಾಂತರವನ್ನು ಪಡೆದು ಚಲಾವಣೆಯಲ್ಲಿದೆ.

"ಕೈಳಾ ಪೀಲ ಕೈಳಾ ಹೋಡು" (ಕಾಗೆ ಮರಿ ಕಾಗೆಗೆ ದೊಡ್ಡದು)

"ಕಾಗೆಗೂ ತನ್ನ ಮರಿ ಹೊನ್ನಮರಿ", " ಹೆತ್ತ ಅಬ್ಬೆಗೆ ಹೆಗ್ಗಣ ಮುದ್ದು" ಇವು ಸಮಾನಾರ್ಥವನ್ನು ಕೊಡುವ ಕನ್ನಡದ ಗಾದೆಗಳಾಗಿವೆ.

"ಹತ್ತಾ ತೊಳತ ಪಳಾಕ ಕನ್ನೆಟಿ ಇಚ್ಚ" (ಅಂಗೈ ನೋಡಲು ಕನ್ನಡಿ ಬೇಕೇ)

ಕನ್ನಡದಲ್ಲಿ "ಅಂಗೈ ಹುಣ್ಣಿಗೆ ಕನ್ನಡಿ ಬೇಕೇ" ಎಂದು ಸ್ವಲ್ಪ ಬದಲಾವಣೆಯಾಗಿ ಈ ಗಾದೆ ಮಾತು ಬಂದಿದೆ.

"ನಚ್ಚಾ ಕಣ್ಣಥಿಲ್ಲಾಕ ಅಂಜಣ ವಂಕುಡ" (ಕುಣಿಯಲು ಬಾರದವನಿಗೆ ಅಂಗಳ ಡೊಂಕು)

"ಕುಣಿಯಲಾರದ ಸೂಳೆ ನೆಲ ಡೊಂಕು ಅಂದ ಹಾಗೆ"– ಈ ಗಾದೆ ಮಾತು ಕನ್ನಡದಲ್ಲಿದೆ.

"ಮಕ್ಕಡಾ ಹತ್ತಾನ್ನು ಮಾಣಿಕ್ಯ ಫತ್ತರು ದಿಲ್ಲೊಸ" (ಮಂಗನ ಕೈಯಲ್ಲಿ ಮಾಣಿಕ್ಯ ಕೊಟ್ಟ ಹಾಗೆ )

"ಲೋಣ ಖಿಲ್ಲೊಲೊ ಉದೊ ಪೀಂತೊ" (ಉಪ್ಪು ತಿಂದವ ನೀರು ಕುಡಿದಾನು)

ಹೀಗೆ ಕರ್ಹಾಡ ಭಾಷೆಯಲ್ಲಿ ಸರಳವಾದ ಅರ್ಥಪೂರ್ಣವಾದ ಸ್ವತಂತ್ರ ಗಾದೆಗಳು ಪ್ರಾಸಬದ್ಧವಾಗಿ ಬಂದಿರುವುದನ್ನು ಕಾಣಬಹುದಾಗಿದೆ. ಜೊತೆಗೆ ಅನುವಾದಿತ ಗಾದೆಗಳೂ ಸಾಕಷ್ಟಿವೆ. ಕರ್ಹಾಡ ಜನಾಂಗದ

ಸಂಸ್ಕೃತಿಯನ್ನು ತಿಳಿಯಲು ಈ ಗಾದೆ ಮಾತುಗಳು ಬಹಳಷ್ಟು ಸಹಕಾರಿಯಾಗಿದೆ. ಮಾತುಗಾರನಿಗೆ ಮಾತಿನ ಗುರಿಯನ್ನು ಮುಟ್ಟಲು ಇಂತಹ ಗಾದೆಗಳು ಬಹಳಷ್ಟು ಪ್ರಯೋಜನಕ್ಕೆ ಬರುತ್ತದೆ. ಈ ಗಾದೆಗಳ ಸಂಗ್ರಹದಿಂದ ಕಣ್ಮರೆಯಾದ ಶಬ್ದಗಳನ್ನು ಸಂಗ್ರಹಿಸಲು ಸಾಧ್ಯವಾಗುತ್ತದೆ.

೪.೩ ಒಗಟುಗಳು :

ಒಗಟುಗಳು ಜನಪದ ಸಾಹಿತ್ಯದ ಶ್ರೀಮಂತ ಪ್ರಕಾರಗಳಲ್ಲಿ ಒಂದು. ಇದು ಬುದ್ಧಿಯನ್ನು ಪರೀಕ್ಷೆ ಮಾಡುವ ಸ್ಪಷ್ಟ ಸಾಧನವಾಗಿದೆ. ಕರ್ಾಡ ಭಾಷೆಯಲ್ಲಿ ಒಗಟಿಗೆ "ಉಮ್ಮಣಿಂ" ಎನ್ನುತ್ತಾರೆ. "ಉಮ್ಮಣಿಂ" ಎನ್ನುವುದು "ಉನ್ಮನಸ್" ಎಂಬ ಸಂಸ್ಕೃತ ರೂಪದಿಂದ ಹುಟ್ಟಿದುದೆಂದು ಶ್ರೀ ಮಂಜೇಶ್ವರ ಮುಕುಂದ ಪ್ರಭುಗಳು ಹೇಳುತ್ತಾರೆ. 'Confuse' ಗಲಿಬಿಲಿ ಮಾಡು ಎಂದಿದರರ್ಥ. ಕನ್ನಡದಲ್ಲಿ ಒಗಟು, ಒಡಪು, ಒಂಟು, ಮುಂಡಿಗೆ, ಬೆಡಗಿನ ವಚನ, ಒಗಟೆ, ಒಡಗತೆ ಎಂದೆಲ್ಲ ಹೆಸರಿನಿಂದ ಕರೆಯುತ್ತಾರೆ.

ಒಗಟು ಕೂಡಾ ಗಾದೆಯಂತೆ ವ್ಯಷ್ಠಿ ಸೃಷ್ಟಿಯಾದರೂ ಬಹುಬೇಗನೆ ವ್ಯಷ್ಠಿ ಲಯವಾಗಿ ಸಮಷ್ಟಿಯ ಸೊತ್ತಾಗುತ್ತದೆ. ಜನಪದ ಸಾಹಿತ್ಯ ಪ್ರಕಾರಗಳಲ್ಲಿ ಮೊದಲು ಗೀತೆ ಹುಟ್ಟಿತು. ಅನಂತರ ಕಥೆ ಹುಟ್ಟಿತು. ಗಾದೆಗಳು ಗೀತೆ ಕತೆಗಳ ಜತೆಜತೆಗೆ ಹುಟ್ಟಿರಬಹುದಾದರೂ 'ಒಗಟು' ಗಾದೆಯ ನಂತರವೇ ಹುಟ್ಟಿದ ಪ್ರಕಾರವೆಂಬ ಅಭಿಪ್ರಾಯವಿದೆ.

ಗಾದೆ ಬಳಸದ ಜನವೇ ಇಲ್ಲ. ಆದರೆ ಒಗಟು ಎಲ್ಲರಿಗೂ ಬಿಡಿಸುವುದಕ್ಕಾಗುವುದಿಲ್ಲ. ಒಗಟುಗಳು ಕೇಳುವುದಕ್ಕೆ ತುಂಬ ಕುತೂಹಲ ಹುಟ್ಟಿಸಿರುವಂತಿರುತ್ತದೆ. ಇದರಲ್ಲಿ ಬುದ್ಧಿಯ ಕಸರತ್ತಿಗೆ ಪ್ರಾಧಾನ್ಯ. ಒಗಟಿನಲ್ಲಿ ಜಾಣ್ಮೆ ಚಾಕಚಕ್ಯತೆಗೆ ಒತ್ತು. ಆದ್ದರಿಂದಲೇ ಒಗಟಿನ ಭಾಷೆ ಬೇರೆ, ಗಾದೆಯ ಭಾಷೆ ಬೇರೆ. ಒಗಟಿನ ಭಾಷೆ ಸಾಂಕೇತಿಕವಾಗಿದ್ದು ರಹಸ್ಯಾತ್ಮಕವಾಗಿರುತ್ತದೆ. ಒಗಟುಗಳೆಲ್ಲ ಸವಾಲಿನ ಮತ್ತು ಪ್ರಶ್ನೆಯ ರೂಪದಲ್ಲಿರುತ್ತದೆ. ಪ್ರಶ್ನೆ ಸ್ಪಷ್ಟವಾಗಿರಬಹುದು ಅಥವಾ ಗೂಢವಾಗಿರಬಹುದು. ಒಗಟು ಒಂದು ರೀತಿಯಲ್ಲಿ ಪ್ರಯತ್ನ ಪೂರ್ವಕವಾದ ಸೃಷ್ಟಿಯೆಂದು ಹೇಳ ಬೇಕಾಗುತ್ತದೆ.

ಗದ್ಯ ಪದ್ಯಗಳೆರಡರಲ್ಲೂ ಒಗಟು ಕಟ್ಟಬಹುದಾದರೂ ಪದ್ಯ ರೂಪದ ಒಗಟುಗಳೇ ಜಾಸ್ತಿ ಇದೆ. ಪದ್ಯದಲ್ಲಿದ್ದರೆ ಆಕರ್ಷಕವಾಗಿದ್ದು ನೆನಪಿನಲ್ಲಿಡಲು ಸುಲಭವಾಗುತ್ತದೆ.

೪.೩.೧. ಕರ್ಾಡ ಭಾಷೆಯ ಒಗಟುಗಳು :

ಕರ್ಾಡ ಭಾಷೆಯಲ್ಲಿ ಸ್ವತಂತ್ರ ಒಗಟುಗಳು ಮತ್ತು ಅನುವಾದಿತ ಒಗಟುಗಳು ಧಾರಾಳವಾಗಿ ಇವೆ. ಒಗಟುಗಳನ್ನು ಸುಲಭದಲ್ಲಿ ಬಿಡಿಸಲು ಸಾಧ್ಯವಾಗುವುದಿಲ್ಲ. ಒಗಟನ್ನು ಬಿಡಿಸುವುದೂ ಒಂದು ಕಲೆ. ಒಗಟನ್ನು ಹೇಳುವವನು ಕೇಳುವವನೆ ಕುತೂಹಲವನ್ನು ಕೆರಳಿಸುವ ರೀತಿಯಲ್ಲಿ ಚಾಕಚಕ್ಯತೆಯಿಂದ ಹೇಳುತ್ತಾನೆ. ಕರ್ಾಡ ಭಾಷೆಯಲ್ಲಿ ಕನ್ನಡ, ತುಳು, ಮಲೆಯಾಳದಿಂದ ರೂಪಾಂತರಗೊಂಡ ಒಗಟುಗಳೂ ಇವೆ.

ಗುಡುಗುಡು ಕರ್ರ, ಚೆಪ್ಪುಡಿ ಧರ್ರ (ವಳಂಕು) (ಗುಡುಗುಡು ಮಾಡುತ್ತದೆ, ಬಾಲ ಹಿಡಿಯುತ್ತದೆ– ಗೆರಟೆಯ ಸೌಟು)

ವಿಶ್ಲೇಷಣೆ:– ಹಂಡೆಯಿಂದ ಬಿಸಿ ನೀರನ್ನು ತೆಗೆದು ಸ್ನಾನ ಮಾಡಲು ಉಪಯೋಗಿಸುವ ತೆಂಗಿನ ಗೆರಟೆಯಿಂದ ತಯಾರಿಸಿದ ವಸ್ತು "ವಳಂಕು". ತೆಂಗಿನ ಕಾಯಿಯನ್ನು ಮುಕ್ಕಾಲು ಭಾಗ ಪೂರ್ಣ ಆಕಾರ

ಬರುವ ರೀತಿಯಲ್ಲಿ ಒಡೆದು ನಯವಾಗಿ ಮೇಲ್ಮೈ ಮತ್ತು ಒಳಮೈಯನ್ನು ಹದಮಾಡಿ ಅದಕ್ಕೆರಡು ತೂತನ್ನು ನೇರ ತೆಗೆದು, ಆ ತೂತಿನೊಳಗೆ ಅಡಕೆ ಮರದ ನಯವಾದ ಉರುಟಾದ ಸಲಿಕೆಯೊಂದನ್ನು ತುರುಕಿಸಿ `ವಳಂಕು´ ಎನ್ನುವ ಸಾಧನವನ್ನು ತಯಾರಿಸಲಾಗಿದೆ. ಕರ್ವಾಡದಲ್ಲಿ ಪ್ರತಿಯೊಂದು ಮನೆಯಲ್ಲೂ ಹಿಂದೆ ಈ ಸಾಧನವು ಬಳಕೆಯಲ್ಲಿತ್ತು.

"ಸರ ಸರವಾಲಿ ಸ್ವರ್ಗಾಗೆಲ್ಲಿ ಅವಯಿ ಮೆಲ್ಲಿ ಧೂವ ಬಯಿಸರ್ಲಿ" (ಕೋನಣೆ ಕೊನ್ನಾವಾಲಿ)

(ಸರಸರ ಎಂದು ಬಳ್ಳಿ ಸ್ವರ್ಗಕ್ಕೆ ಹೋಯ್ತು, ತಾಯಿಸತ್ತು, ಮಗಳು ಹೊರಟಳು)

ಉತ್ತರ: ಗೆಣಸಿನಂತಿರುವ ಒಂದು ಗಡ್ಡೆ ಮತ್ತು ಅದರ ಬಳ್ಳಿ (ಬಳ್ಳಿ ಕೇನೆ)

ವಿಶ್ಲೇಷಣೆ:- ಗೆಣಸಿನಂತಿರುವ ಒಂದು ಗೆಡ್ಡೆ ಮಳೆ ಬರುವಾಗ  ಅಥವಾ ನೀರಿನಾಶ್ರಯ ಸಿಕ್ಕಿದಾಗ ಮೊಳೆತು ಚಿಗುರೊಡೆದು ಬಳ್ಳಿಯಾಗುತ್ತದೆ. ಬೆಳೆದ ಬಳ್ಳಿಯು ಬಿಸಿಲ ತಾಪಕ್ಕೆ ಒಣಗಿ ಸತ್ತು ಹೋಗುತ್ತದೆ. ಸರಸರನೆ ಬೆಳೆದ ಬಳ್ಳಿ ಸತ್ತು ಪುನ: ನೀರು ಸಿಕ್ಕಿದಾಗ ಗೆಡ್ಡೆ ಚಿಗುರಿ ಪುನ: ಬಳ್ಳಿಯಾಗುತ್ತದೆ.  ತಾಯಿ ಸಾಯುತ್ತಾಳೆ.  ಮಗಳು ಹೊರಡುತ್ತಾಳೆ.

"ದೋಳಾಂಕ ದೀಸನ ಹತ್ತಾ ಮೇಡ್ರ" (ಉತ್ತರ - ಕಾನು)

(ಕಣ್ಣಿಗೆ  ಕಾಣುವುದಿಲ್ಲ ಕೈಗೆ ಸಿಗುತ್ತದೆ ಉ- ಕಿವಿ)

"ಗೊಡ್ಡು ರೂಖು ದಿಗ್ಭಂ ಪತ್ತ" (ಉತ್ತರ -ಊಚಿ)

(ಸಿಹಿ ಮರದಲ್ಲಿ ಉದ್ದದ ಎಲೆ- ಕಬ್ಬು)

"ಹಾಲ ಹಲಹಲ ಫೂಲ ಗಿಲಿಗಿಲಿ ಮಜ್ಝ ನಾವ  ಐಯ್ಯಯ್ಯೋ! (ಮೀರಿಂ)

(ಈ ಒಗಟು ಅನುವಾದಕ್ಕೆ ಒಗ್ಗುವುದಿಲ್ಲ.  ಉತ್ತರ- ಗಾಂಧಾರಿ ಮೆಣಸು)

ಸುರು ಸುರು ಪಕ್ಕಿಯಾಂಕ ಸಾಸುದೋಳೆ (ದೋಸೆ)

(ಸುರು ಸುರು ಹಕ್ಕಿಗೆ ಸಾವಿರ ಕಣ್ಣು)

"ಸಾಸು ಚೆಡ್ವಾಂಕ ಏಕು ಕುಂರ್ಟಾದೋರು"( ಸಾರಣಿ)

(ಸಾವಿರ ಮಕ್ಕಳಿಗೆ ಒಂದೇ ಉಡಿದಾರ - ಉತ್ತರ: ಹಿಡಿಸೂಡಿ)

"ಫುಳ್ಳೆ ರಾವೊ ಮಗ್ಗಿಲೆಂ ಸೈನ್ಯ" (ಕೇಳಾಯೆ)

(ಮುಂದೆ ರಾಜ ಹಿಂದೆ ಸೈನಿಕರು - ಉತ್ತರ : ಬಾಳೆಗೊನೆ)

"ಅಮ್ಮೇನ ದಿಲ್ಲಿ ಹತ್ತುರಿ ಕವಳ್ಯಾಕ ದೈನಾ, ಅಪ್ಪೇನ ದಿಲ್ಲೆ ಪೈಶೆ

ಮೆಜ್ಜಾಕ ದೈನಾ" (ಉತ್ತರ: ಆಕಾಶ, ನಕ್ಷತ್ರ)

(ಅಮ್ಮ ಕೊಟ್ಟ ಚಾಪೆ ಮಡಚಲಾಗುವುದಿಲ್ಲ, ಅಪ್ಪ ಕೊಟ್ಟ ದುಡ್ಡು ಎಣಿಸಲಾಗುವುದಿಲ್ಲ)

ದಿನನಿತ್ಯ ಬದುಕಿನಲ್ಲಿ ಉಪಯೋಗಿಸುವ ವಸ್ತುಗಳಿಗೆ ಸಂಬಂಧಿಸಿದ ಹಾಗೆ ಕರ್ವಾಡ ಭಾಷೆಯಲ್ಲಿ ಒಗಟುಗಳು ಸೃಷ್ಟಿಯಾಗಿದೆ. ಕರ್ವಾಡರ ಸಂಸ್ಕೃತಿಯನ್ನು ಅರ್ಥೈಸಲು ಇಂತಹ ಒಗಟುಗಳು ಅನುಕೂಲವಾಗಿವೆ. ಸರಳವಾಗಿದ್ದು ಅರ್ಥಪೂರ್ಣವಾದ ಒಗಟುಗಳ ಅಧ್ಯಯನದಿಂದ ದಿನಬಳಕೆಯಲ್ಲಿ ಇಂದು ಉಪಯೋಗದಲ್ಲಿಲ್ಲದ ವಸ್ತುಗಳನ್ನು ಸಂಗ್ರಹಿಸಲು ಸಾಧ್ಯವಾಗುತ್ತದೆ. ಕರ್ವಾಡ ಭಾಷೆಯ ಶಬ್ದ ಭಂಡಾರವನ್ನು ಬೆಳೆಸುವಲ್ಲಿ ಒಗಟುಗಳ ಪಾತ್ರ ಮಹತ್ವದ್ದಾಗಿದೆ.

## ೪.೪ ಜಾನಪದ ಕಥೆಗಳು:

ಪ್ರಪಂಚದ ಅತ್ಯಂತ ಜನಪ್ರಿಯ ಸಾಹಿತ್ಯ ಪ್ರಕಾರವೆಂದರೆ ಕಥೆಗಳು. ಕಥೆಯನ್ನು ಹೇಳುವವರಿದ್ದರೆ ಕೇಳುವವರು ಸಾಕಷ್ಟು ಸಂಖ್ಯೆಯಲ್ಲಿದ್ದಾರೆ. ಹಿಂದಿನ ಕಾಲದಲ್ಲಿ ಅಜ್ಜಿ ಮೊಮ್ಮಕ್ಕಳಿಗೆ ಪ್ರತಿ ದಿನ ಒಂದೊಂದು ಕಥೆಯನ್ನು ಹೇಳಿ ಮಕ್ಕಳ ಮನಸ್ಸನ್ನು ಸಂತೋಷಪಡಿಸುತ್ತಿದ್ದಳು. ಮಕ್ಕಳು ಕೂಡಾ ಕಥೆ ಕೇಳಿ ಆನಂದಿಸುತ್ತಿದ್ದರು. ಕಥೆಗೆ ಸಮ್ಮೋಹನ ಶಕ್ತಿ ಇದೆ. ಸಣ್ಣ ಮಕ್ಕಳು ಅಜ್ಜಿಯ ಹತ್ತಿರ ಹೋಗಿ ಕತೆ ಹೇಳೆಂದು ಪೀಡಿಸುತ್ತವೆ. ನಿದ್ದೆ ಮಾಡದೆ ಹಠ ಹಿಡಿಯುವ ಮಕ್ಕಳಿಗೆ ಕಥೆ ನೆಮ್ಮದಿಯನ್ನು ಕೊಟ್ಟು ನಿದ್ರಾಲೋಕಕ್ಕೆ ಕೊಂಡೊಯ್ಯುತ್ತಿದೆ. ವಯೋಮಾನದ ಮಿತಿ ಇಲ್ಲದೆ ಕಥೆ ಸರ್ವರನ್ನೂ ಒಂದೇ ರೀತಿಯಲ್ಲಿ ತೃಪ್ತಿಪಡಿಸುತ್ತದೆ. ಜೀವನದ ಕಷ್ಟವನ್ನು ಮರೆಯುವಂತೆ ಮಾಡುವ ಮಾನಸಿಕ ಯಾತನೆಯನ್ನು ಹೋಗಲಾಡಿಸುವ ಶಕ್ತಿ ಕಥೆಗಳಿಗಿವೆ.

ಕಥೆಯನ್ನು ಕೇಳುವವನಲ್ಲಿ ಆಸಕ್ತಿ ಹುಟ್ಟವಂತೆ ಕಥೆಗಾರ ಕಥೆಯನ್ನು ಹೇಳಬಲ್ಲವನಾಗಿರುತ್ತಾನೆ. ಕೇಳುಗನಿಗೆ ಕೇಳುವ ಕುತೂಹಲ ಹೆಚ್ಚಿದಂತೆ ಕಥೆ ಹೇಳುವವನಲ್ಲಿ ಅದೊಂದು ಹವ್ಯಾಸವಾಗಿ ಕ್ರಮೇಣ ಮುಂದುವರಿಯುತ್ತದೆ. ತನ್ನ ಭಂಡಾರದಲ್ಲಿ ಕಥೆಗಳು ಮುಗಿದರೆ ಹೊಸತಾಗಿ ಕಥೆಗಳನ್ನು ಸೃಷ್ಟಿಸಿಯೂ ಅವನು ಹೇಳಬಲ್ಲವನಾಗಿರುತ್ತಾನೆ.

ಕುತೂಹಲದಿಂದ ಕಥೆ ಹೇಳುತ್ತಿರುವಾಗ ಕೇಳುಗರಲ್ಲಿ ಯಾರಾದರೂ ಪ್ರಶ್ನಿಸಿದರೆ ಸರಾಗವಾಗಿ ಮುಂದುವರಿಯುತ್ತಿರುವ ಕಥೆಗೆ ಅಡಚಣೆಯುಂಟಾಗುತ್ತದೆ. ಕಥೆ ಹೇಳುವುದಕ್ಕಿಂತಲೂ ಮೊದಲೇ ಕಥೆಯ ನಡುವೆ ಯಾರೂ ಪ್ರಶ್ನಿಸಬಾರದು. ಪ್ರಶ್ನೆಗಳೆಲ್ಲವೂ ಕೊನೆಗೆ ಎಂದು ತಾಕೀತು ಕೆಲವೊಮ್ಮೆ ಮಕ್ಕಳಿಗೆ ಮಾಡುತ್ತಾರೆ.

ಹೇಳುವ ಕಥೆಗಳು ವಾಸ್ತವ ಘಟನೆಯನ್ನವಲಂಬಿಸಿರಬಹುದು. ಐತಿಹ್ಯವೊಂದಕ್ಕೆ ಸಂಬಂಧಿಸಿರಬಹುದು. ಕಟ್ಟುಕತೆಯೂ ಆಗಿರಬಹುದು. ಒಟ್ಟಿನಲ್ಲಿ ಅದು ಕಥೆಯಾದರೆ ಸಾಕು ಕೇಳುವುದಕ್ಕೆ ಜನಮುಗಿಬೀಳುತ್ತಾರೆ. ಕಥೆಯಿಂದ ಮನೋರಂಜನೆ ಸಿಗುತ್ತದೆ. ಜ್ಞಾನಾರ್ಜನೆ ಉಂಟಾಗುತ್ತದೆ. ಕೆಲವು ಕಥೆಗಳನ್ನು ಕೇಳಿದಾಗ ಸ್ಫೂರ್ತಿ ಬಂದೊದಗುತ್ತದೆ. ಕಥೆ ಹೇಳುವವನೂ ಜಾಣನಾದರೆ ಅವನು ಶ್ರೋತೃಗಳ ಮನೋಧರ್ಮ, ಅಭಿರುಚಿಗೆ ತಕ್ಕಂತೆ ಪ್ರತಿಸ್ಪಂದಿಸುತ್ತಾನೆ.

ಈ ಮೌಖಿಕ ಕಥೆಗಳು ಅತ್ಯಂತ ಪ್ರಾಚೀನವಾದವುಗಳಾಗಿರಬೇಕು. ಜನಪದ ಕಥೆಗಳಲ್ಲಿ 'ನೀತಿಗೂ ಪ್ರಾಮುಖ್ಯವಿದೆ. ಜನಪದ ಕಥೆಗಳೆಲ್ಲ ಸಾಮಾನ್ಯವಾಗಿ ಗದ್ಯದಲ್ಲಿಯೇ ಇದೆ. ಕಥೆಗಳೆಲ್ಲ ಒಂದೇ ಧಾಟಿಯಲ್ಲಿ ಪ್ರಾರಂಭವಾಗಿ ಸುಖದಲ್ಲಿ ಮುಕ್ತಾಯವಾಗುತ್ತದೆ. ಕಥೆಯ ಹಂದರ ಸರಳವಾಗಿರುತ್ತದೆ. ಚಿಕ್ಕಚಿಕ್ಕ ವಾಕ್ಯಗಳಿಂದ ಕಥೆ ಓದಿಸಿಕೊಂಡು ಹೋಗುತ್ತದೆ.

### ೪.೪.೧. ಕರ್ನಾಡ ಭಾಷೆಯ ಕಥೆಗಳು:

ಕರ್ನಾಡ ಭಾಷೆಯಲ್ಲೂ ಜಾನಪದ ಕಥೆಗಳಿವೆ. ಅವುಗಳಲ್ಲಿ ಕೆಲವು ಪ್ರಾದೇಶಿಕ ಭಾಷೆಗಳಾದ ಕನ್ನಡ, ತುಳು, ಮಲೆಯಾಳಗಳಿಂದ ಅನುವಾದಗೊಂಡವುಗಳಾಗಿದೆ. ಕೆಲವು ಸ್ವತಂತ್ರ ಕಥೆಗಳಾಗಿವೆ. ಸ್ವತಂತ್ರ ಕಥೆಗಳಲ್ಲಿ ಪ್ರಾಣಿಕತೆಗಳು, ರಾಜ ರಾಣಿಗಳು, ನೀತಿಕತೆಗಳು ಸಾಮಾನ್ಯವಾಗಿ ಕಂಡುಬರುತ್ತದೆ. ಇಲ್ಲಿ ಕರ್ನಾಡ ಭಾಷೆಯ ಜನಪದ ಕಥೆಗಳನ್ನು ಉಲ್ಲೇಖಿಸಿದ್ದೇನೆ.

ಒಂದು ದಿವಸ ಒಂದು ಹಕ್ಕಿಯು ಒಂದು ಹುಳದೊಡನೆ "ಕೀಡಿ ಕೀಡಿ ಹ್ವಾವ ತುಕ್ಕ ಖವ್ವಾ?" (ಹುಳವೇ ಹುಳವೇ ನಾನು ನಿನ್ನನ್ನು ತಿನ್ನಲೇ") ಎಂದು ಪ್ರಶ್ನಿಸಿತು. ಆಗ ಆ ಹುಳವು "ಕಿಡಿ ಕೀಡಿ ಖೌ ಕೀಡಿ ಒಡ್ಡು ಉದೊ ಧೌ ತೋಂಡ ಖೌ ಕೀಡಿ" (ಬಾವಿಯಿಂದ ನೀರು ತೆಗೆದು ಮುಖ ತೊಳೆದು ಮತ್ತೆ ತಿನ್ನು") ಎಂದಿತು. ಅಷ್ಟಾಗುವಾಗ ಹಕ್ಕಿಯು ಮುಖ ತೊಳೆಯಲು ಬಾವಿಯ ಪತ್ತಿರಕ್ಕೆ ಬಂದು ಬಾವಿಯೊಡನೆ "ಬಯಿ ಬಯಿ ದೀ ಉದೊ ಕಡ್ದುಂ ಪಾಳಿ ಧೌ ತೋಂಡ ಖೌ ಕೀಡಿ" (ಬಾವಿಯಿಂದ ನೀರು ತೆಗೆದು ಮುಖ ತೊಳೆದು ಹುಳ ತಿನ್ನುತ್ತೇನೆ") ಎಂದು ಬಾವಿಯಲ್ಲಿ ನೀರನ್ನು ಹೇಳಿತು. ಹಕ್ಕಿಯು ಆಗ ಕುಂಬಾರನಲ್ಲಿಗೆ ಬಂದು "ಕುಂಬಾರ ಕುಂಬಾರ ದೀ ಕಳಸೊ ಠೆವು ಬಯಿ ಕಡ್ದುಂ ಪಾಳಿ ಧೌ ತೋಂಡ ಖೌ ಕೀಡಿ" ("ಕುಂಬಾರ ಕುಂಬಾರ ಕೊಡ ಕೊಡು ಬಾವಿಯಿಂದ ನೀರು ತೆಗೆದು ಮುಖ ತೊಳೆದು ಹುಳ ತಿನ್ನುತ್ತೇನೆ") ಕೊಡ ಕೊಡು ಎಂದಿತು. ಆಗ ಕುಂಬಾರನು "ಮತ್ತಿದಾಯಿ" (ಮಣ್ಣು ಬೇಕು) ಮಣ್ಣನ್ನು ಕೊಡು ಎಂದು ಕೇಳಿದನು. ಹಕ್ಕಿಯು ಮಣ್ಣು ತರಲು ಧರೆಯ ಸಮೀಪ ಹೋಗಿ "ಡಗ್ಗ್ಯೆ ಡಗ್ಗ್ಯೆ ದೀ ಮತ್ತಿ ಕಾಡು ಮತ್ತಿ ದೆವು ಕುಂಬಾರ ಕಾಡು ಕುಡವುಲ ಫುಲ್ಲು ಬಯಿ ಕಡ್ಡು ಪಾಳಿ ದೌ ತೋಂಡ ಖೌ ಕೀಡಿ (ದರೆ ದರೆ ಮಣ್ಣು ಕೊಡು. ಮಣ್ಣು ತೆಗೆದು ಕುಂಬಾರನಿಗೆ ಕೊಟ್ಟು ಕೊಡಕೊಂಡು ಬಾವಿಗಿಳಿಸಿ ನೀರು ತೆಗೆದು ಮುಖ ತೊಳೆದು ಹುಳ ತಿನ್ನುತ್ತೇನೆ) ಎಂದು ದರೆಯಲ್ಲಿ ಮಣ್ಣು ಕೇಳಿತು. ಆಗ ದರೆಯು "ಶೀಂಗ ದಾಯ್ಕೆ" (ಕೋಡು (ಕೊಂಬು) ಕೊಡು) ಎಂದಿತು. ಹಕ್ಕಿಯು ದನದ ಬಳಿಹೋಗಿ "ಗಯಿ ಗಯಿ ದೀ ಶೀಂಗ, ದೆವು ಡಗ್ಗೆ ಕಾಡು ಮತ್ತಿ ದೆವು ಕುಂಬಾರ, ಕಾಡುಂ ಕುಡವುಲ ಘಲ್ಲು ಬಯಿ ಕಡ್ದು ಪಾಳಿ ಧೌ ತೋಂಡ ಖೌ ಕೀಡಿ" (ದನ, ದನ ಕೋಡು ಕೊಡು, ದರೆ ಮಣ್ಣು ಕೊಡಲಿ, ಕುಂಬಾರ ಕೊಡ ಮಾಡಲಿ, ಕೊಡದಿಂದ ನೀರು ತೆಗೆದು ಮುಖ ತೊಳೆದು ಹುಳ ತಿನ್ನುತ್ತೇನೆ) ಎಂದು ಹಕ್ಕಿ ಹೇಳಿತು. ಆಗ ದನವು "ತವಣದಾಯೆ" (ಹುಲ್ಲು ಕೊಡು) ಎಂದು ಹುಲ್ಲು ಕೇಳಿತು. ಹಕ್ಕಿಯು "ಮೇರೆ" ಎಂಬ ಹೆಸರಿನ ಹೆಣ್ಣಿನಲ್ಲಿ "ಮೇರೆ ಮೇರೆ ದೀ ತವಣ ಕಾಡು ತವಣದೆವು ಗಯಿಂ ಕಾಡು ಶೀಂಗ, ದೆವು ಡಗ್ಗ್ಯೆ ಕಾಡು ಮತ್ತಿ ದೆವು ಕುಂಬಾರ, ಕಾಡು ಕುಡವುಲ ಘಲ್ಲು ಬಯಿ ಕಡ್ದು ಪಾಳಿ ಧೌ ತೋಂಡ ಖೌ ಕೀಡಿ".

(ಮೇರೆ ಮೇರೆ ಹುಲ್ಲು ಕೊಯ್ದು ಕೊಡು. ದನಕ್ಕೆ ಹುಲ್ಲು ಕೊಟ್ಟು ಕೊಂಬು ಪಡೆದು, ದರೆಗೆ ಕೊಂಬು ಕೊಟ್ಟು ಮಣ್ಣು ಪಡೆದು, ಮಣ್ಣು ಕುಂಬಾರನಿಗೆ ಕೊಟ್ಟು ಕೊಡ ಪಡೆದು ಕೊಡದಿಂದ ನೀರು ತೆಗೆದು ಮುಖ ತೊಳೆದು ಹುಳ ತಿನ್ನುತ್ತೇನೆ) ಎಂದು ಹುಲ್ಲನ್ನು ಕಿತ್ತು ಕೊಡಲು ಕೇಳಿತು. ಹುಲ್ಲು ಕೀಳಲು "ಈಳೊ ದಾವೊ" (ಕತ್ತಿ ಬೇಕು) ಎಂದು ಮೇರೆ ಕತ್ತಿ ಕೇಳಿದಳು. ಕೂಡಲೇ ಹಕ್ಕಿಯು ಕಮ್ಮಾರನಲ್ಲಿಗೆ ಹೋಗಿ " ಕಮ್ಮಾರ ಕಮ್ಮಾರ ದೀ ಈಳೋ ದೆವು ಮೇರೆ ಕಾಡು ತವಣ ದೆವು ಗಯಿ ಕಾಡು ಶೀಂಗ ದೆವು ಡಗ್ಗ್ಯೆ ಕಾಡು ಮತ್ತಿ ದೆವು ಕುಂಬಾರ ಕಾಡು ಕುಡವುಲಿ ಘಲ್ಲು ಬಯ ಕಡ್ದು ಪಾಳಿ ಧೌ ತೋಂಡ ಬೌ ಕೀಡಿ" ( ಕಮ್ಮಾರ ಕಮ್ಮಾರ ಕತ್ತಿ ಕೊಡು, ಮೇರೆ ಹುಲ್ಲು ಕಿತ್ತು ಕೊಡಲಿ, ದನ ಹುಲ್ಲು ತಿಂದು ಕೋಡು ಕೊಡಲಿ, ಕೋಡಿನಿಂದ ದರೆ ಮಣ್ಣು ಕೊಡಲು, ಮಣ್ಣಿನಿಂದ ಕುಂಬಾರ ಕೊಡ ಮಾಡಲಿ. ಆ ಕೊಡದಿಂದ ಬಾವಿಯ ನೀರು ತೆಗೆದು ಮುಖ ತೊಳೆದು ಹುಳ ತಿನ್ನುತ್ತೇನೆ) ಎಂದು ಹೇಳಿತು. ಹಕ್ಕಿಗೆ ಕಮ್ಮಾರನು ಕಬ್ಬಿಣ ತರಲು ಹೇಳಿದನು. ಬಂಟ್ವಾಳಕ್ಕೆ ಹೋಗಿ ಕಬ್ಬಿಣ ತಂದು ಕೊಟ್ಟಿತು. ಕಮ್ಮಾರನು ಕಬ್ಬಿಣದಿಂದ ಕತ್ತಿ ಮಾಡಿ ಕೊಟ್ಟನು. ಮೇರೆ ಕತ್ತಿಯಿಂದ ಹುಲ್ಲು ಕೊಯ್ದು ಕೊಟ್ಟಳು. ಆ ಹುಲ್ಲನ್ನು ದನ ತಿಂದು ಕೊಂಬು ಕೊಟ್ಟಿತು. ಆ ಕೊಂಬನ್ನು ದರೆಗೆ ಕೊಟ್ಟಾಗ ದರೆ ಮಣ್ಣು ಕೊಟ್ಟಿತು. ಆ ಮಣ್ಣು ಕುಂಬಾರನಿಗೆ ಕೊಟ್ಟಾಗ ಕುಂಬಾರ

ಕೊಡ ಮಾಡಿ ಕೊಟ್ಟನು. ಕೊಡ ಬಾವಿಗೆ ಕೊಟ್ಟಾಗ ಬಾವಿ ನೀರು ಕೊಟ್ಟಿತು. ಬಾವಿಯಿಂದ ನೀರು ತೆಗೆದು ಮುಖ ತೊಳೆದು ಹುಳವನ್ನು ತಿನ್ನಲು ಹತ್ತಿರ ಹೋದಾಗ ಅದು ಹಾಗಲಕಾಯಿಯ ಒಳಗೆ ನುಗ್ಗಿತು.

ವಿಶ್ಲೇಷಣೆ: ಈ ಕಥೆಯಲ್ಲಿ ಹಕ್ಕಿಯು ಹುಳವನ್ನು ತಿನ್ನಲು ಬಯಸಿ ಅದರೊಡನೆ ಪ್ರಶ್ನಿಸುತ್ತದೆ. ಹಕ್ಕಿಯೊಂದು ತನ್ನನ್ನು ತಿನ್ನಲು ಯೋಚಿಸಿದಾಗ ಹುಳವು ಒಂದು ಉಪಾಯವನ್ನು ಕಂಡು ಕೊಂಡಿತು. ಮುಖ ತೊಳೆದು ತನ್ನನ್ನು ತಿನ್ನಲು ಸೂಚಿಸುತ್ತದೆ. ಮುಖ ತೊಳೆಯಲು ನೀರು ಬೇಕು. ಹಕ್ಕಿ ಬಾವಿಯಲ್ಲಿ ನೀರು ಕೇಳುತ್ತದೆ. ಬಾವಿ ಕೊಡಕೇಳುತ್ತದೆ. ಕೊಡಮಾಡಲು ಮಣ್ಣು ಬೇಕು. ಮಣ್ಣು ಅಗೆಯಲು ಹರಿತವಾದ ಉಪಕರಣ ಬೇಕು. ಕೊನೆಗೂ ಹಕ್ಕಿ ಪ್ರಯತ್ನ ಪಟ್ಟು ಕಬ್ಬಿಣ ತಂದು ಕತ್ತಿ ಮಾಡಿಸಿ ಹುಲ್ಲು ಕೊಯ್ಯಿಸಿ ದನಕ್ಕೆ ಹಾಕಿ ಕೊಂಬನ್ನು ಪಡೆದು ದರೆಗೆ ಕೊಡುತ್ತದೆ. ದರೆ ಮಣ್ಣು ಕೊಟ್ಟಾಗ " ಕುಂಬಾರನಿಗೆ ಕೊಡ ಮಾಡಿಸಿ ಬಾವಿಯಿಂದ ನೀರು ತೆಗೆದು ಹಕ್ಕಿ ಮುಖ ತೊಳೆಯುತ್ತದೆ. ಮುಖ ತೊಳೆದು ಹುಳದ ಹತ್ತಿರ ಹೋದಾಗ ಹುಳ ಹಾಗಲ ಕಾಯಿಯ ಒಳಗೆ ನುಗ್ಗುತ್ತದೆ. ಇದು ಈ ಕಥೆಯ ವಸ್ತು.

ಕೆಲವು ಹಕ್ಕಿಗಳ ಆಹಾರ ಹುಳ. ಇಲ್ಲಿ ಬದುಕಬೇಕಿದ್ದರೆ ಹುಳವನ್ನು ತಿನ್ನಬೇಕು. ತಾನು ತಿನ್ನುವ ಹುಳದಲ್ಲಿ ನಿನ್ನನ್ನು ತಿನ್ನುತ್ತೇನೆ ಎಂದು ಕೇಳಿದರೆ. ಅದು ಒಪ್ಪಿಗೆ ಕೊಡಲು ಸಾಧ್ಯವಿಲ್ಲ. 'ತಿನ್ನಬೇಡ' ಎಂದು ಹೇಳಿದರೆ ವಿರೋಧ ಕಟ್ಟಿ ಕೊಳ್ಳ ಬೇಕಾಗುತ್ತದೆ. ಇಂತಹ ಸಂದಿಗ್ದ ಪರಿಸ್ಥಿತಿ ಎದುರಾದಾಗ ಪಾರಾಗುವ ಉಪಾಯವನ್ನು ಯಾರೂ ಹೇಳಿಕೊಡಬೇಕಾಗಿಲ್ಲ. ಹೇಳಿ ಕೊಟ್ಟರೆ ಬರುವಂತಹದೂ ಅಲ್ಲ. ಅದನ್ನೆಲ್ಲ ತಾವೇ ಕಂಡು ಕೊಳ್ಳ ಬೇಕು. ಕಷ್ಟ ಬಂದಾಗ ಎದುರಿಸುವ ಬಗೆಯನ್ನು ಅರಿತವನು ಕಷ್ಟದಿಂದ ಪಾರಾಗಬಹುದು. ಇಲ್ಲಿ ಹುಳ ಧೈರ್ಯವಾಗಿ ಕಷ್ಟವನ್ನು ಎದುರಿಸಿದೆ. ಹಾಗಾಗಿ ಹಕ್ಕಿಯಿಂದ ಪಾರಾಗಿದೆ. ಜೀವ ಉಳಿಸಿ ಕೊಂಡಿದೆ. ಶಕ್ತಿ ಇಲ್ಲದವ ಯುಕ್ತಿಯಿಂದಲಾದರೂ ಗೆಲ್ಲ ಬಹುದು.

ಹಕ್ಕಿಯ ಕುರಿತು ಯೋಚಿಸಿದರೆ ಹುಳವನ್ನು ತಿನ್ನಲು ಹಕ್ಕಿ ಸಾಕಷ್ಟು ಪ್ರಯತ್ನ ಪಟ್ಟಿದೆ. ಅದರ ತಾಳ್ಮೆ ಎಲ್ಲರೂ ಮೆಚ್ಚ ಬಹುದು. ಆದರೆ ತಿನ್ನಲು ಹುಳ ಸಿಕ್ಕಲಿಲ್ಲ. ಆದರೂ ಹಕ್ಕಿಗೆ ತನ್ನ ಪ್ರಯತ್ನದ ಬಗ್ಗೆ ತೃಪ್ತಿ ಸಿಕ್ಕಿರಬೇಕು.

ಕಥೆಗಾರನಿಗೆ ಇಲ್ಲಿ ಹುಳವನ್ನು ರಕ್ಷಿಸುವುದು ಮುಖ್ಯ. ಕಷ್ಟದಲ್ಲಿ ಸಿಕ್ಕಿ ಕೊಂಡಿರುವುದು ಹುಳ. ಕಷ್ಟದಲ್ಲಿದ್ದವರಿಗೆ ಸಹಾಯ ಮಾಡಬೇಕು. ಕಷ್ಟ ಬಂದಾಗ ಹುಳ ಇಲ್ಲಿ ಧೈರ್ಯ ಕಳ ಕೊಳ್ಳುವುದಿಲ್ಲ. ಈ ಕಷ್ಟದಿಂದ ಪಾರಾಗಬಲ್ಲೆ ಎನ್ನುವ ಆತ್ಮ ವಿಶ್ವಾಸ ಹುಳಕ್ಕಿದೆ. ಕಷ್ಟದಿಂದ ಪಾರಾಗುವ ಉಪಾಯವನ್ನೂ ತಾನೇ ಕಂಡು ಕೊಂಡು ಜೀವವನ್ನೂ ಹುಳ ಉಳಿಸಿಕೊಂಡಿತು.

ಕಥೆಗಾರನಿಗೆ ಹಕ್ಕಿ ಬದುಕಬೇಕು. ಹುಳ ಉಳಿಬೇಕು. ಅದಕ್ಕೆ ಸೂಕ್ತ ಉಪಾಯವನ್ನು ಕಂಡು ಕೊಂಡು ಹುಳವನ್ನು ಹಾಗಲಕಾಯಿಯ ಒಳಗೆ ಕಳುಹಿಸಿದ. ಹಾಗಲಕಾಯಿಯಲ್ಲಿ ಹುಳಗಳು ಇರುವುದು ವಾಸ್ತವ. ಎಲ್ಲರೂ ಅದನ್ನು ಒಪ್ಪುತ್ತಾರೆ. ಕಥೆಯನ್ನು ಕೇಳುವುದು ಸಂತೋಷಕ್ಕಾದರೂ ಬೌದ್ಧಿಕ ಚಿಂತನೆಗೂ ಅಲ್ಲಿ ಅವಕಾಶವಿರಬೇಕು. ಈ ದೃಷ್ಟಿಯಿಂದ ಕಥೆಗೆ ಕಥೆಗಾರ ಒಳ್ಳೆಯ ಮುಕ್ತಾಯವನ್ನೇ ಕೊಟ್ಟಿದ್ದಾರೆ.

ಪುನರಾವರ್ತನೆಯನ್ನು ಕಥೆಯಲ್ಲಿ ಕಾಣಬಹುದು. ಕಥೆ ಬೆಳೆದಂತೆ ಹೇಳಿದ ಅಂಶಗಳಿಗೆ ಹೊಸ ಹೊಸ ವಿಚಾರಗಳು ಜೋಡಣೆಯಾಗುತ್ತಾ ಹೋಗುತ್ತದೆ. ಪುನರಾವರ್ತನೆಯಿಂದ ಬೇಸರವೆನಿಸಿದರೂ ಭಾಷೆ ಕಾವ್ಯಮಯವಾಗಿ ಮುಂದುವರಿಯುತ್ತದೆ. ಸುಖಾಂತ್ಯದಲ್ಲಿ ಕಥೆ ಮುಕ್ತಾಯವಾಗುತ್ತದೆ.

ಬಾವಿ, ನೀರು, ಕೊಡ, ಮಣ್ಣು, ದರೆ, ಹುಲ್ಲು, ದನ, ಕಬ್ಬಿಣ, ಕುಂಬಾರ ಕಮ್ಮಾರ ಇವೆಲ್ಲ ಬದುಕಿನ ಅವಿಭಾಜ್ಯ ಅಂಗಗಳು.

ಇವಿಲ್ಲದೇ ಬದುಕೇ ಇಲ್ಲ. ಒಬ್ಬರನ್ನೊಬ್ಬರು ಅವಲಂಬಿಸಿಯೇ ಬದುಕು ನಡೆಯಬೇಕಾಗುತ್ತದೆ. ಕುಂಬಾರ ಮಣ್ಣಿನಿಂದ ಪಾತ್ರೆಗಳನ್ನು ತಯಾರಿಸುತ್ತಾನೆ. ಅದು ಅವನ ಕಸುಬು. ಕಮ್ಮಾರ ಕಬ್ಬಿಣದಿಂದ ವಸ್ತುಗಳನ್ನು ತಯಾರಿಸುತ್ತಾನೆ. ಆ ಕಲೆ ಅವನಿಗೆ ಮಾತ್ರ ಗೊತ್ತಿದೆ.

* * *

ಒಂದು ಊರಿನಲ್ಲಿ ಏಳು ಜನ ಅಣ್ಣ ತಮ್ಮಂದಿರು ಮತ್ತು ಒಬ್ಬಳು ತಂಗಿ ಇದ್ದಳು. ಅವಳು ಒಂದು ದಿವಸ ಮುಟ್ಟಾದಳು. ಆಗ ಅವಳು ಒಬ್ಬ ಅಣ್ಣನ ಮನೆಗೆ ಹೋಗಿ ಹೀಗೆ ಹೇಳಿದಳು. "ಅಣ್ಣಾ ಅಣ್ಣಾ ಹ್ವಾವ ತುಥ್ಥಾ ತಳಾ ನ್ವೌವಾ" (ಅಣ್ಣಾ ಅಣ್ಣಾ ನಾನು ನಿನ್ನ ಕೆರೆಯಲ್ಲಿ ಸ್ನಾನ ಮಾಡಲಿಯಾ?) ಆಗ ಅಣ್ಣನು 'ತ್ಥೂ ತಾಳಿ ಥತ್ತಿ, ಬಾಗಿ ಥತ್ತಿ, ಹೊಳದಿ ಥತ್ತಿ, ಮುದ್ದಿ ಥತ್ತಿ ತೂ ಮುಥ್ಥಾ ತಳಾ ನ್ವೌನಕ್ಕ" (ನೀನು ಸರಳಿ ಹಾಕುವಿ, ಬಾಗೆ ಹುಡಿ ಹಾಕುವಿ, ಅರಸಿನ ಹಾಕುವಿ, ಉಂಗುರ ಹಾಕುವಿ, ನೀನು ನನ್ನ ಕೆರೆಯಲ್ಲಿ ಸ್ನಾನ ಮಾಡಬೇಡ)ಎಂದನು. ಹೀಗೆ ಆರು ಜನ ಅಣ್ಣಂದಿರು ಹೇಳಿದರು. ಆರು ಜನರೂ ಕೆರೆಯಲ್ಲಿ ಸ್ನಾನ ಮಾಡಲು ಬಿಡಲಿಲ್ಲ. ಕಡೆಯದಾಗಿ ಕೊನೆಯ ಅಣ್ಣನಲ್ಲಿ ಹೋಗಿ ಹೀಗೆಯೇ ಕೇಳಿದಳು. ಅದಕ್ಕೆ ಅವನು ಉಳಿದ ಅಣ್ಣಂದಿರು ಹೇಳಿದ ಹಾಗೇಯೇ ಹೇಳಿದನು ಆಗ ಅವಳು ಪ್ರತ್ಯುತ್ತರವಾಗಿ "ಹ್ವಾವ ತಾಳಿ ಥನ್ನ, ಬಾಗಿ ಥನ್ನ , ಹೊಳದಿ ಥನ್ನ , ಮುದ್ದಿ ಥನ್ನ (ನಾನು ಸರಳಿ ಹಾಕುವುದಿಲ್ಲ, ಬಾಗೆ ಹುಡಿ ಹಾಕುವುದಿಲ್ಲ, ಅರಸಿನ ಹಾಕುವುದಿಲ್ಲ, ಉಂಗುರ ಹಾಕುವುದಿಲ್ಲ.) ಎಂದಳು. ಹೀಗೆ ಅವಳು ಕೊನೆಯ ಅಣ್ಣನ ಕೆರೆಯಲ್ಲಿ ಸ್ನಾನ ಮಾಡಿದಳು. ಸ್ನಾನ ಮಾಡುವಾಗ ಅವಳ ಉಂಗುರ ಕೆರೆಯಲ್ಲಿ ಬಿತ್ತು. ಒಂದು ದಿವಸ ಅವಳ ಅಣ್ಣ ಕೆರೆಯ ನೀರನ್ನು ತೋಟಕ್ಕೆ ಬಿಟ್ಟನು. ಆಗ ಒಂದು ಉಂಗುರ ಕೆರೆಯಿಂದ ಸಿಕ್ಕಿತು. ಆ ಉಂಗುರವನ್ನು ತೆಗೆದುಕೊಂಡು "ಈ ಮುದ್ದಿ ಕೊಣ್ಣ ಉಂಗುಳ್ಯೇ ದಾರಕಿ ತೆಕ್ಕ ಹಾವ ಹಾರ್ಡಿ ದಾರ್" (ಈ ಉಂಗುರ ಯಾರ ಬೆರಳಿಗೆ ಸರಿಯಾಗುತ್ತದೋ ಅವಳನ್ನು ನಾನು ಮದುವೆಯಾಗುತ್ತೇನೆ) ಎಂದು ಹೇಳಿದನು. ಆ ಉಂಗುರ ಯಾರ ಕೈಗೆ ಹಾಕಿದರೂ ಸರಿಯಾಗಲಿಲ್ಲವಂತೆ. ಕೊನೆಗೆ ಆ ಉಂಗುರ ಅವನ ತಂಗಿಯ ಕೈಗೆ ಮಾತ್ರ ಸರಿಯಾಗುತಿತ್ತು. ಅನಂತರ ಆ ಅಣ್ಣನು ಆ ತಂಗಿಯನ್ನೇ ಮದುವೆಯಾದನು. ಆಗ ತಂಗಿಯು ಹೀಗೆ ಹೇಳುತ್ತಾಳೆ "ಅಣ್ಣ ದಲ್ಲಲೊ ಬಮ್ಮಣು ದಲ್ಲೊ, ಅಪ್ಪ ದಲ್ಲಲೊ ಮಾಮು ದಲ್ಲೊ, ಅಮ್ಮ ದಲ್ಲಲಿ ಮಾಯಿದಲ್ಲಿ" ವ್ಹಣ್ಣು ರಳ್ಳಿಮ (ಅಣ್ಣನಾದವ ಗಂಡನಾದ, ಅಪ್ಪನಾದವ ಮಾವನಾದ , ಅಮ್ಮನಾದವಳು ಅತ್ತೆಯಾದಳು ಎಂದು ಹೇಳಿ ಅತ್ತಳಂತೆ).

ವಿಶ್ಲೇಷಣೆ: ಅಣ್ಣ ತಂಗಿಯನ್ನು ಮದುವೆಯಾಗುವ ಸಂಪ್ರದಾಯ ಎಲ್ಲಿಯೂ ಇಲ್ಲ. ಆದರೆ ಪರಿಸ್ಥಿತಿ ಅವಳನ್ನು ಮದುವೆಯಾಗುವಂತೆ ಮಾಡಿತು. ಅವಳ ಬೆರಳ ಉಂಗುರ ಬೇರಾರ ಕೈಗೂ ಆಗಲಿಲ್ಲ. ಕೈಗೆ ಉಂಗುರ ಸಿಕ್ಕಿದ ಕೂಡಲೇ ಅಣ್ಣನು "ಈ ಉಂಗುರ ಯಾರ ಕೈ ಬೆರಳಿಗೆ ಸರಿಯಾಗುತ್ತದೋ ಅವಳನ್ನು ನಾನು ಮದುವೆಯಾಗುತ್ತೇನೆ" ಎಂದು ಉಂಗುರ ಸಿಕ್ಕಿದ ಸಂತೋಷದಲ್ಲಿ ಸಾರಿ ಬಿಟ್ಟ. ಮಾತು ಕೊಟ್ಟಾಗಿದೆ ಇನ್ನು ಮಾತಿನಂತೆ ನಡೆದುಕೊಳ್ಳಬೇಕು. ಇಲ್ಲವಾದರೆ ಮಾತಿಗೆ ತಪ್ಪಿದವ ಎನ್ನುವ ಅಪವಾದಕ್ಕೆ ಗುರಿಯಾಗಬೇಕಾಗುತ್ತದೆ. ಹಾಗಾಗಿ ತಂಗಿಯನ್ನೇ ಮದುವೆಯಾಗಬೇಕಾಯಿತು. ಆದರೆ ತಂಗಿಗೆ ಅಣ್ಣನನ್ನು ಮದುವೆಯಾದುದರಿಂದ ಸಂಕಟ ತಡೆಯದಾಗಿದೆ. "ಅಣ್ಣನಾದ ಗಂಡನಾದ"

ಮುಂತಾಗಿ ಹೇಳಿ ಅಳುತ್ತಾಳೆ. ಉಂಗುರ ಸಿಕ್ಕಿದ ಕ್ಷಣ ಅವನ ಬಾಯಿಯಿಂದ ಅಂತಹ ಮಾತುಗಳು ಬರಬಾರದಿತ್ತು. ಮಾತನಾಡುವಾಗ ಯೋಚಿಸದೆ ಮಾತನಾಡಿದರೆ ಅದರ ಪರಿಣಾಮ ಎಷ್ಟು ಆಘಾತವನ್ನುಂಟುಮಾಡುತ್ತದೆ ಎನ್ನುವ ನೀತಿ ಈ ಕಥೆಯಿಂದ ವ್ಯಕ್ತವಾಗುತ್ತದೆ.

★ ★ ★

ಐದು ಜನ ಅಕ್ಕ ತಂಗಿಯರು ಒಂದು ಕೆರೆಗೆ ಸ್ನಾನಮಾಡಲು ಹೋದರು. ಮೊದಲಿಗೆ ದೊಡ್ಡವಳು ಸ್ನಾನ ಮಾಡಿದಳು. ಅನಂತರ ಅವಳ ತಂಗಿ ಸ್ನಾನ ಮಾಡಿದಳು. ಹೀಗೆಯೇ ನಾಲ್ಕು ಜನರೂ ಸ್ನಾನ ಮಾಡಿದರು. ಕಡೆಗೆ ಐದನೆಯವಳು ಸ್ನಾನ ಮಾಡಿದಳು. ಅವಳು ಸ್ನಾನ ಮಾಡಿ ಮೇಲೆ ಬರುವಾಗ ಒಂದು ಅರಸಿನ ಕೊಂಬು ಕೆರೆಯಲ್ಲಿ ಬಿತ್ತು. ಆಗ ಆ ನಾಲ್ಕು ಜನ ಅಕ್ಕಂದಿರು "ಅಮ್ಮಿ ನ್ಹಾಂತಣ ಪಣ್ಣಥ್ಥಿಲ್ಲಂ ಹೊಳದಿ ಮಂಡಂ ತುವೆ ನ್ಹೌನು ಎಂತಣ ಕಸಂ ಪಳ್ಳಂ" (ನಾವು ಸ್ನಾನ ಮಾಡುವಾಗ ಬೀಳದ ಅರಸಿನ ಕೊಂಬು ನೀನು ಸ್ನಾನ ಮಾಡಿ ಬರುವಾಗ ಹೇಗೆ ಬಿತ್ತು) ಎಂದು ಹೇಳುತ್ತಾರೆ. ನಾಲ್ಕು ಜನ ಅಕ್ಕಂದಿರೂ ಕೂಡ ತಂಗಿಗೆ ಜೋರು ಮಾಡುತ್ತಾರೆ. ಆಗ ಅವಳು "ಅಪ್ಪೇನಣೆ ಅಮ್ಮೇನ ಮ್ಹಳಸಂ ಹ್ಹಾವಂ ಐಕ್ಕರ ದಲ್ಲೇರಿ ಹೊಳದೀಮಂಡ ಓರಿ ಎವು" (ಅಪ್ಪ ಹಾಗೂ ಅಮ್ಮ ಹೇಳಿದ ಹಾಗೆ ನಾನು ಕೇಳುತ್ತೇನಾದರೆ ಅರಸಿನ ಕೊಂಬು ಮೇಲೆ ಬರಲಿ)ಎಂದು ಹೇಳುತ್ತಾಳೆ.ಆದರೂ ಅರಸಿನ ಕೊಂಬು ಮೇಲೆ ಬರುವುದಿಲ್ಲ. ಮತ್ತೆ ಹೇಳುತ್ತಾಳೆ "ಅಕ್ಕೇನಣೆ ಭಾವೇನ ಮ್ಹಳಸಂ ಐಕ್ಕರಂ") ಅಕ್ಕ ಹಾಗೂ ಭಾವ ಹೇಳಿದ ಹಾಗೆ ಕೇಳುತ್ತೇನೆ. ಆದರೂ ಅರಸಿನ ಕೊಂಬು ಮೇಲೆ ಬರುವುದಿಲ್ಲ. ಆಗ ಅವಳು ಹೀಗೆ ಹೇಳುತ್ತಾಳೆ "ಮುಕ್ಕ ಹರ್ಡಿದಲ್ಲೆರಿ ಬಮ್ಮಣೇನ ಮ್ಹಳಸಂ ಅಯಿಕ್ಕರ" (ನನಗೆ ಮದುವೆಯಾದರೆ ಗಂಡ ಹೇಳಿದ ಹಾಗೆ ಕೇಳುತ್ತೇನೆ) ಎನ್ನುತ್ತಾಳೆ. ಆಗ ಅರಸಿನ ಕೊಂಬು ಮೇಲೆ ಬರುತ್ತದೆ. ಈ ದೂರನ್ನು ತೆಗೆದುಕೊಂಡು ನಾಲ್ಕೂ ಜನರೂ ಅಪ್ಪ ಅಮ್ಮ ಇದ್ದ ಕಡೆಗೆ ಹೋಗುತ್ತಾರೆ. ಆಗ ಅಪ್ಪ ಅಮ್ಮ ಜೋರುಮಾಡಿ "ದಲ್ಲೇರಿ ತುಕ್ಕ ಕಾಯೆಂ ನಥ್ಥಿಲ್ಯಾಕ ಹರ್ಡಿಕರುಂ ದೆವುಪ"(ಹಾಗಾದರೆ ನಿನ್ನನ್ನು ಏನೂ ಇಲ್ಲದವರಿಗೆ ಮದುವೆ ಮಾಡಿ ಕೊಡುವುದು) ಎಂದು ಹೇಳುತ್ತಾರೆ. ನಾಲ್ಕು ಜನ ಅಕ್ಕಂದಿರನ್ನೂ ಕೂಡ ದೊಡ್ಡ ಕಡೆಗೆ ಮದುವೆ ಮಾಡಿ ಕೊಡುತ್ತಾರೆ. ಸಣ್ಣವಳನ್ನು ಪಾಪದವನಿಗೆ ಮದುವೆ ಮಾಡಿಕೊಡುತ್ತಾರೆ.

ಸ್ವಲ್ಪ ಸಮಯ ಕಳೆದ ನಂತರ ತಾಯಿಮನೆಯ ಜಂಬ್ರಕ್ಕೆ ತಂಗಿಯು ಅವಳ ಮಕ್ಕಳನ್ನು ಕರೆದುಕೊಂಡು ಬರುತ್ತಾಳೆ. ಎಲ್ಲರೂ ಊಟಕ್ಕೆ ಕುಳಿತುಕೊಳ್ಳುವಾಗ ಇವಳೂ ಕೂಡ ಮಕ್ಕಳನ್ನು ಕರೆದುಕೊಂಡು ಊಟಕ್ಕೆ ಕುಳಿತಳು. ಆಗ ಅಪ್ಪ ಅಮ್ಮ ಕುಳಿತಲ್ಲಿಂದ ಅವಳ ಕೈಯೆಳೆದು ಹೊರಹಾಕಿದಳು. ಹಸಿವಿನಿಂದ ಮಕ್ಕಳು ಅಳುತ್ತಾ ಇದ್ದರು. ಎಲ್ಲರ ಊಟ ಆಗಿ ಸಂಬಂಧಿಕರೆಲ್ಲ ಹೋದರೂ ಇವರಿಗೆ ಊಟ ಕೊಡಲಿಲ್ಲ. ಕತ್ತಲೆಯಾಗುವಾಗ ಹಸಿವಾದ ಮಕ್ಕಳನ್ನು ಕರೆದುಕೊಂಡು ಮನೆಗೆ ಬರುತ್ತಾಳೆ. ಬರುವ ದಾರಿಯಲ್ಲಿ ದಡ್ಡಳೆ ಮರದ ತಿರಿ (ಕೊಂಬೆ ಅಂಕುರ್ಯೊ) ನೋಡಲು ಸಿಗುತ್ತದೆ. ಅದನ್ನು ಕ್ಯೊದು ಮಕ್ಕಳು ಅಮ್ಮ ಮನೆಗೆ ಬರುತ್ತಾರೆ. ಅಷ್ಟರಲ್ಲೇ ಕತ್ತಲಾಗುತ್ತದೆ.

ಮಣ್ಣಿನ ಮಡಕೆಯಲ್ಲಿ ಆ ತಿರಿಯನ್ನು ಹಾಕಿ ಅದಕ್ಕೆ ಸ್ವಲ್ಪ ನೀರು ಹಾಕಿ ಮುಚ್ಚಿ ಒಲೆಯ ಮೇಲೆ ಇಡುತ್ತಾಳೆ. ಒಲೆಗೆ ಬೆಂಕಿ ಮಾಡಿ ಬೇಯುವಾಗ ಮಕ್ಕಳಿಗೆ ಕೊಡುವ ಎಂದು ಅವಳು ಮಲಗುತ್ತಾಳೆ. ಮಕ್ಕಳಿಗೂ ನಿದ್ದೆ ಬರುತ್ತದೆ. ಬೆಳಗ್ಗೆ ಏಳುವಾಗ ಅಡಿಗೆ ಕೋಣೆಯಲ್ಲಿ ದೊಡ್ಡ ಬೆಳಕು ಕಾಣುತ್ತದೆ. ಇದು ಏನು ಎಂದು ಎದ್ದು ನೋಡುವಾಗ ಮಡಿಕೆಯಲ್ಲಿ ಪ್ರಕಾಶದ ಗಟ್ಟಿ ಕಾಣಿಸುತ್ತದೆ. ಮಡಕೆಯಿಂದ

ಒಂದು ಗಟ್ಟಿ ತೆಗೆದುಕೊಂಡು ಅಕ್ಕಸಾಲಿಗನ ಬಳಿ ಹೋಗುತ್ತಾಳೆ. ಅವನು ಇದು ಚಿನ್ನ ಎಂದು ಹೇಳಿ "ಯೇಂ ತುಕ್ಕ ಖೈಂಟು ಮೇಳ್ಳಂ" (ಇದು ನಿನಗೆ ಎಲ್ಲಿ ಸಿಕ್ಕಿತು?) ಎಂದು ಕೇಳಿದನು. ಅವಳು ಚಿನ್ನದ ಗಟ್ಟಿ ಎಲ್ಲಿಂದ ಸಿಕ್ಕಿತು ಎಂದು ಹೇಳಿದಳು. ಹಾಗೆಯೇ ಒಂದೊಂದು ಗಟ್ಟಿ ತೆಗೆದುಕೊಂಡು ಅವಳು ಮನೆಗೆ ಬೇಕಾದ ಸಾಮಾನು ತಂದಳು. ಮಕ್ಕಳಿಗೆ ಬೇಕಾದ ಬಟ್ಟೆ ತಂದಳು ಹಾಗೆಯೇ ಅವಳಿಗೆ ಮತ್ತು ಅವಳ ಗಂಡನಿಗೆ ಬೇಕಾದ ಬಟ್ಟೆ ತಂದಳು. ಹಳೆಯದಾದ ಅವಳ ಮನೆಯನ್ನು ಹೊಸತಾಗಿ ಕಟ್ಟಿದಳು. ಹೊಸ ಮನೆಗೆ ಬೇಕಾದ ವ್ಯವಸ್ಥೆಯನ್ನು ಮಾಡಿದಳು.

ಏನೂ ಇಲ್ಲದವರು ಒಳ್ಳೆಯ ಸ್ಥಿತಿ ಬಂದ ವಿಷಯ ಇಡೀ ಊರಿನಲ್ಲಿ ತುಂಬಿತು. ಊರಿನ ಎಲ್ಲರೂ ಬರಲು ಶುರುಮಾಡಿದರು. ಈ ವಿಷಯ ಅವಳ ತವರಿಗೂ, ನಾಲ್ಕು ಜನ ಅಕ್ಕಂದಿರಿಗೂ, ಭಾವಂದಿರಿಗೂ ತಿಳಿದು ಎಲ್ಲರು ತಂಗಿಯ ಮನೆಗೆ ಬಂದರು, ಬಂದು ಇವಳ ಸೇವೆ ಮಾಡಲು ಶುರುಮಾಡುತ್ತಾರೆ. ಆಗ ಅವಳು ಎಲ್ಲರನ್ನು ಕುರ್ಚಿಯಲ್ಲಿ ಕುಳಿತುಕೊಳ್ಳಲು ಹೇಳಿ, ಎಲ್ಲರಿಗೂ ಸಂತೋಷದಲ್ಲಿ ಊಟ ಬಡಿಸುತ್ತಾಳೆ. ಆ ಸಮಯಕ್ಕೆ ದೊಡ್ಡ ಕೆಲಸಕ್ಕೆ ಹೋದ ಅವಳ ಗಂಡ ಹರಿದ ಬಟ್ಟೆ ಹಾಕಿ ಬರುತ್ತಾನೆ. ಆಗ ಎಲ್ಲಿ ಹುಡುಕಿದರೂ ಅವನಿಗೆ ಮನೆ ಸಿಗುವುದಿಲ್ಲ. ಮಕ್ಕಳಿಗೆ ಅಪ್ಪ ಬರುವುದು ಕಂಡು ಅಮ್ಮನಲ್ಲಿ ಹೇಳುತ್ತಾರೆ. ಆಗ ಹೆಂಡತಿಯು ಒಳ್ಳೆಯ ಬೈರಾಸು,ಅಂಗಿ ತೆಗೆದುಕೊಂಡು ಹೊರಗೆ ಬಂದು ಕೊಡುತ್ತಾಳೆ. ಅವನು ಬೈರಾಸು, ಅಂಗಿ ಹಾಕಿ ಮನೆಯ ಒಳಗೆ ಬರುತ್ತಾನೆ. ಮನೆಯಲ್ಲಿ ಮಾವ, ಅತ್ತೆ, ಹೆಂಡತಿಯ ನಾಲ್ಕು ಜನ ಅಕ್ಕಂದಿರು ಎಲ್ಲರೂ ಕುಳಿತು ಊಟ ಮಾಡುತ್ತಿರುತ್ತಾರೆ. ಆಗ ತವರು ಮನೆಯವರಿಗೆ ಪಶ್ಚಾತ್ತಾಪವಾಗುತ್ತದೆ. ಊಟಕ್ಕೆ ಕೂತ ಕಡೆಯಿಂದ ಕೈ ಹಿಡಿದು ಹೊರಗೆ ಹಾಕಿದ ನೆನಪಾಗುತ್ತದೆ. ಏನೂ ಇಲ್ಲದವರು ಈಗ ನಮಗಿಂತ ಚೆನ್ನಾಗಿ ಇದ್ದಾರೆ ಎಂದು ಅವರಿಗೆ ಅನಿಸುತ್ತದೆ. ಆಗ ತಂಗಿಯು "ಏ ಒಟ್ಟು ದೇವಾಂತ ಅನುಗ್ರಹ" (ಇದು ಎಲ್ಲ ದೇವರ ಕೃಪೆ) ಎಂದು ಹೇಳಿ ಎಲ್ಲರ ಕಾಲು ಹಿಡಿದು ಆಶೀರ್ವಾದ ಕೇಳುತ್ತಾಳೆ.

ವಿಶ್ಲೇಷಣೆ:- ಅರಶಿನ ಕೊಂಬು ನೀರಿನಿಂದ ಮೇಲೆ ಬರಲು ಕಾರಣವಾದ ವಿಚಾರ ತಂದೆ ತಾಯಿಗೆ ತಿಳಿದಾಗ ಅವರು ಅವಳಿಗೆ ಬುದ್ಧಿ ಕಲಿಸಲು ಬಡವನಿಗೆ ಮದುವೆ ಮಾಡಿಕೊಡುತ್ತಾರೆ. ಎಷ್ಟೇ ಕಷ್ಟ ಬಂದರೂ ತಂಗಿ ಗಂಡನ ಮನೆಯಲ್ಲಿ ಹೊಂದಿಕೊಂಡು ಬದುಕುತ್ತಾಳೆ. ತವರು ಮನೆಯಿಂದ ಊಟ ಹಾಕದೆ ಹೊರಹಾಕಿದಾಗ ಅವಳು ಧೈರ್ಯಕುಂದುವುದಿಲ್ಲ. ಪೌಷ್ಟಿಕ ಆಹಾರವಾದ ಮರದ ಚಿಗುರನ್ನು ಬೇಯಿಸಿ ಮಕ್ಕಳ ಹಸಿವನ್ನು ಪರಿಹರಿಸಲು ಮುಂದಾಗುತ್ತಾಳೆ. ಆಕೆ ಮತ್ತು ಮಕ್ಕಳು ನಿದ್ದೆ ಹೋದ ಕಾರಣ ಮರುದಿನ ಪಾತ್ರೆ ತೆರೆದು ನೋಡಿದಾಗ ವಿಚಿತ್ರ ನಡೆದಿರುತ್ತದೆ. ಮುಂದೆ ಆಕೆ ಒಳ್ಳೆಯ ಬದುಕನ್ನು ನಡೆಸುವಂತಾಗುತ್ತದೆ. ಅಕ್ಕಂದಿರು, ಭಾವಂದಿರು, ತಂದೆ ತಾಯಿ ಎಲ್ಲರೂ ಬಂದು ತಂಗಿಯ ಬಾಳನ್ನು ಕಂಡು ನಮಗಿಂತಲೂ ಚೆನ್ನಾಗಿ ಬದುಕುತ್ತಿದ್ದಾಳೆ ಎಂದು ಮನಸ್ಸಿನಲ್ಲಿ ಯೋಚಿಸುತ್ತಾರೆ. ಅಪ್ಪ ಅಮ್ಮ ಹಿಂದೆ ತಾವು ಮಾಡಿದುದನ್ನು ನೆನಪಿಸಿ ಪಶ್ಚಾತ್ತಾಪ ಪಡುತ್ತಾರೆ. ಇದೇ ಹೊತ್ತಿನಲ್ಲಿ ತಂಗಿಯು ತನ್ನ ಹೆತ್ತವರಲ್ಲಿ 'ಇದೆಲ್ಲವೂ ದೈವಾನುಗ್ರಹ' ಎನ್ನುತ್ತಾ ಆಶೀರ್ವಾದ ಕೇಳುತ್ತಾಳೆ.

ಇಲ್ಲಿ ತಂಗಿಯು ತನ್ನ ಮನೆಗೆ ಬಂದವರಿಗೆ ತೃಪ್ತಿಪಡಿಸುತ್ತಾಳೆ. ಗಂಡನ ಜೊತೆಯಲ್ಲಿ ಒಳ್ಳೆಯ ಸಂಸಾರ ನಡೆಸುತ್ತಾಳೆ. ಹಿಂದೆ ತಾನು ಕಷ್ಟದಲ್ಲಿದ್ದಾಗ ತವರು ಮನೆಯಿಂದ ಹೊರ ಹಾಕಿದ ಬಗ್ಗೆ ಚಿಂತಿಸದೆ ತನ್ನ ಮನೆಗೆ ಬಂದವರನ್ನು ಒಳ್ಳೆಯ ಆತಿಥ್ಯವನ್ನೇ ನೀಡುತ್ತಾಳೆ. ಎಲ್ಲರ ಒಟ್ಟಿಗೆ ಕುಳಿತು

ಸಂತೃಪ್ತಿಯನ್ನು ಪಡೆಯುತ್ತಾಳೆ. ಇದು ನಮ್ಮ ಸಂಸ್ಕೃತಿಯೂ ಕೂಡ. ಮನಸ್ಸಿನಲ್ಲಿ ಕೆಟ್ಟ ವಿಚಾರವನ್ನು ಯೋಚಿಸುವುದೇ ಇಲ್ಲ. ಇದು ಎಲ್ಲರಲ್ಲೂ ಇರಬೇಕಾದ ಗುಣ. ಇಂತಹ ಗುಣದಿಂದ ಮನುಷ್ಯನು ಬೆಳೆಯುತ್ತಾನೆ. ಆ ಗುಣ ಆಕೆಯಲ್ಲಿತ್ತು. ಹಾಗಾಗಿ ದೈವಾನುಗ್ರಹವೂ ಅವಳಿಗೆ ಬಂದೊದಗಿತು.

ಅಪ್ಪ ಅಮ್ಮನಿಗೆ ತಾವು ಹೇಳಿದಂತೆ ಮಗಳು ಕೇಳುವುದಿಲ್ಲ ಎನ್ನುವ ಅಂಶದ ಕಡೆ ಮನಸ್ಸು ಹೋಗಿ ಬಡವನಿಗೆ ಮದುವೆ ಮಾಡಿಕೊಟ್ಟರು. ಆ ರೀತಿ ಚಿಂತಿಸುವುದು ಒಳ್ಳೆಯದಲ್ಲ ಎಂಬ ಅಂಶವೂ ಇದೆ. ಕಥೆಯು ಕುತೂಹಲದಿಂದ ಮುಂದುವರಿಯುತ್ತಾ ಸುಖಾಂತ್ಯವಾಗಿದೆ. ಚಿಂತನೆಗೆ ಅವಕಾಶ ಕೊಡುವ ಉತ್ತಮ ಕಥೆ ಇದು.ಸಮಾಜ ಒಂದರ ವಿವಿಧ ಘಟಕಗಳು ತಮ್ಮ ತಮ್ಮ ಉತ್ಪಾದನೆಗಳ ಮೂಲಕವೇ ಹೊಂದಾಣಿಕೆ ಮಾಡಿಕೊಳ್ಳುವ ವಿಚಾರ ಈ ಕಥೆಯಲ್ಲಿ ಸ್ಪಷ್ಟವಾಗಿ ಪ್ರತಿಬಿಂಬಿತವಾಗಿದೆ.

೪.೫. ಶಿಶು ಗೀತೆಗಳು:

ಜಾನಪದ ಸಾಹಿತ್ಯದ ಒಂದು ವಿಶಿಷ್ಟ ಪ್ರಕಾರ ಶಿಶುಗೀತೆ. ಶಿಶು ಗೀತೆಗಳನ್ನು ಲಾಲಿ ಪದಗಳೆಂದೂ ಜೋಗುಳ ಹಾಡುಗಳೆಂದೂ ಕರೆಯುತ್ತಾರೆ. ಕರ್ಾಡ ಭಾಷೆಯಲ್ಲಿ ಇರುವ ಶಿಶುಗೀತೆಗಳಲ್ಲಿ ಕೆಲವನ್ನು ಅರ್ಥೈಸಬಹುದು. ಇನ್ನು ಕೆಲವು ಗೀತೆಗಳು ಸ್ವಾರಸ್ಯಕರವಾಗಿ ಅರ್ಥ ಪೂರ್ಣ ವಿಚಾರಗಳನ್ನು ಅಡಗಿಸಿ ಕೊಂಡಿದೆ.

ಇತರ ಜನಪದ ಸಾಹಿತ್ಯ ಪ್ರಕಾರಗಳಂತೆ ಶಿಶು ಗೀತೆಗಳೂ ಸಹ ಸಮಷ್ಟಿಯ ಸೃಷ್ಟಿ. ಇವುಗಳೆಲ್ಲ ಅರ್ಥಕ್ಕಿಂತ ಶಬ್ದ ಚಮತ್ಕಾರಕ್ಕೇ ಪ್ರಾಶಸ್ತ್ಯ. ಅರ್ಥವಿರುವ ಎಡೆಗಳಲ್ಲಿ ನೇರ ಮತ್ತು ಸರಳ ಸಾಲುಗಳು ನಿರಂತರ ಮುಂದುವರಿಯುತ್ತದೆ. ಪ್ರಾಸ ಈ ಗೀತೆಗಳಲ್ಲಿ ಅನಿವಾರ್ಯವಾಗಿದೆ. ಅನುಕರಣ ಪದಗಳು ಕೆಲವು ಶಿಶುಗೀತೆಗಳಲ್ಲಿದೆ ಕಲ್ಪನೆ ಇಲ್ಲಿ ಕೆಲಸ ಮಾಡುತ್ತದೆ. ಅಸಂಬಂದ್ಧತೆ ಮತ್ತು ಅನೌಚಿತ್ಯಗಳು ಅಲ್ಲಲ್ಲಿ ಕಾಣಿಸುವುದೂ ಇದೆ. ಏಕಾತಾನತತೆಯೇ ಇಲ್ಲಿ ಮುಖ್ಯವಾಗಿದೆ. ಮನೋರಂಜನೆಯೇ ಈ ಶಿಶುಗೀತೆಗಳ ಗುರಿಯಾಗಿದೆ. ತಾಯಿ ಮಗುವಿನೊಂದಿಗೆ ಕಳೆಯುವ ಕ್ಷಣಗಳು ತಾಯಿಗೆ ಹಿತವನ್ನು ಕೊಡುತ್ತದೆ. ಆಗ ಬಾಯಿಯಿಂದ ಶಿಥಿಲವಾದ ಪದಗಳು ಹೊರಬರುತ್ತವೆ. ವಿಷಯಗಳು ಸಮಂಜಸವಾಗಿರುವುದಿಲ್ಲ. ಮಕ್ಕಳಲ್ಲಿ ಮುದನೀಡುವುದು, ಏಕತಾನತೆಯನ್ನು ತರುವುದು ಈ ಶಿಶು ಗೀತೆಗಳ ಮುಖ್ಯ ಉದ್ದೇಶವಾಗಿದೆ.

೪.೫.೧. ಕರ್ಾಡ ಭಾಷೆಯ ಶಿಶು ಗೀತೆಗಳು :

ಈ ಶಿಶು ಗೀತೆಗಳು ತಾಯಂದಿರ ಸೃಷ್ಟಿ. ತಮ್ಮ ಮಕ್ಕಳನ್ನು ಮುದ್ದಾಡುವಾಗ, ಎಣ್ಣೆ ಹಚ್ಚಿ ಸ್ನಾನ ಮಾಡಿಸುವಾಗ, ರಾಗಿ ಮಣ್ಣಿಯನ್ನು ಮಗುವಿಗೆ ಉಣ್ಣಿಸುವಾಗ, ತೊಟ್ಟಿಲು ತೂಗುವಾಗ, ಮಕ್ಕಳು ಹಠ ಮಾಡಿ ಅತ್ತಾಗ ಸಾಂತ್ವನ ಪಡಿಸುವವಳು ತಾಯಿ. ಮಕ್ಕಳು ಅಳು ನಿಲ್ಲಿಸಿ ನಗುವಾಗಲೇ ಅವಳಿಗೆ ತೃಪ್ತಿ.

ಮಗುವಿಗೆ ಪ್ರತಿ ದಿನ ಎಣ್ಣೆ ಹಚ್ಚಿ "ತಾಳ್ಳಿ"[1] ಹಾಕಿ ಮಗುವನ್ನು ಸ್ನಾನ ಮಾಡಿಸುವವಳು ತಾಯಿ. ಎಣ್ಣೆ ಹಚ್ಚಲು ಆಕೆ ಅನುಕೂಲವಾಗಿರುವ ಅಡಿಕೆ ಮರದ ಸೋಗೆಯ ಹಾಳೆಯನ್ನು ಮಗುವನ್ನು ಮಲಗಿಸಲು ಉಪಯೋಸುತ್ತಾಳೆ. ಎಣ್ಣೆ ಹಚ್ಚಿ ಶರೀರಕ್ಕೆ ಮಸಾಜು ಮಾಡು ಕೈಕಾಲುಗಳನ್ನು ಚೆನ್ನಾಗಿ ತಿಕ್ಕಿ ಸ್ವಲ್ಪ ಹೊತ್ತು ಮಗುವನ್ನು ಅದರಷ್ಟಕ್ಕೆ ಇರಲು ಬಿಡುತ್ತಾಳೆ. ಎಣ್ಣೆಯನ್ನು ಲೇಪಿಸಿ ಅಭ್ಯಂಜನ ಮಾಡುವಾಗ ಆಕೆಯ ಬಾಯಿಯಿಂದ

"ಗುಜು ಗುಜು ಬಾಳಾಕ ಗುಜು ಗುಜು

ಗುಜುಗುಜು ಕರುಂ

ಮಂದಾರ ಪಾಡುಂ

ಸಕ್ಕಲ್ಲಾ ಘರಾಚ್ಯಾ ಕುಞ ಬಯ್ಯೆ ಹಾಡುಂ" ಎಂದು ಹೇಳುತ್ತಾಳೆ

"ಎಣ್ಣೆ ಹಚ್ಚಿ ಹಾಡು ಹೇಳಿ ಕೆಳಗಿನ ಮನೆಯ ಸಣ್ಣ ಹುಡುಗಿಯನ್ನು ತರುವ" ಎನ್ನುವ ಶಿಶುಗೀತೆ ತನ್ನಿಂದತಾನಾಗಿಯೇ ಹೊರಬರುತ್ತದೆ. ಈ ಗೀತೆ ಪ್ರಾಸಯುಕ್ತವಾಗಿದ್ದು ಅನುಕರಣ ಪದದಿಂದ ಕೂಡಿದೆ. ಬಾಲ್ಯವಿವಾಹದ ಕುರುಹು ಈ ಹಾಡಿನಲ್ಲಿ ಕಾಣಲು ಸಾಧ್ಯವಿದೆ.

ಮಗುವಿಗೆ ಎಣ್ಣೆ ಮಾತ್ರವಲ್ಲ ತುಪ್ಪವನ್ನು ಕೆಲವೊಂದು ದಿನಗಳಲ್ಲಿ ಶರೀರಕ್ಕೆ ಲೇಪಿಸುತ್ತಾಳೆ. ಹಳೆ ತುಪ್ಪವನ್ನು ಮೈಗೆ ಇಡೀ ಹಚ್ಚಿ ವ್ಯಾಯಾಮ ಮಾಡಿಸುವಾಗ ಆಕೆ

"ಅಡ್ಕುಲರೇ ಬುಡ್ಕುಲರೇ । ತೆಲ್ಲಾ ತುಪ್ಪಾಚ್ಯೋ

ಬೈರ ಏಕು ಜ್ಹಾಮಯಿ ಐಲೊ । ಫರಂಗಿ ರೂಪಾತ್ಲೋ"

ಎಂದು ಆಕೆ ಹಾಡುತ್ತಾಳೆ. ಕೆಂಪು ಬಣ್ಣವನ್ನು ಉಲ್ಲೇಖಿಸಲು ಫರಂಗಿ ಎನ್ನುವ ಶಬ್ದ ಬಳಕೆಯಾಗಿದೆ. ಈ ಗೀತೆಯ ಅರ್ಥವನ್ನು ಹೇಳಬಹುದು. 'ಅಡ್ಕುಲರೇ' ಎನ್ನುವ ಪದ ಪ್ರಾಸಕ್ಕಾಗಿ ಬಂದಿದೆ.

ಹಿಂದೆ ಎಣ್ಣೆ ತುಪ್ಪವನ್ನು ಸಣ್ಣ ಮಣ್ಣಿನ ಕುಡಿಕೆಯಲ್ಲಿಡುತ್ತಿದ್ದರು. ಹೊರಗೆ ಒಬ್ಬ ಸುಂದರ ರೂಪದ ಅಳಿಯ ಬಂದನು ಇದು ಪ್ರಾಸಯುಕ್ತವಾಗಿದ್ದು ಹಾಡುವುದಕ್ಕೆ ಅನುಕೂಲವಾಗುತ್ತದೆ. ಬೆಣ್ಣೆ ತುಪ್ಪಕ್ಕಿಂತಲೂ ಒಳ್ಳೆಯದು. ಹುಳ ಚರ್ಮ ರೋಗ ನಿವಾರಣೆಗೆ ಇದು ದಿವ್ಯ ಔಷಧಿ ಎಂಬ ನಂಬಿಕೆ ಈಗಲೂ ಇದೆ.

ಎಣ್ಣೆಯ ಅಭ್ಯಂಜನ ಆದ ಮೇಲೆ ತಾಯಿ ಮಗುವನ್ನು ಸ್ನಾನ ಮಾಡಿಸಲು ಹಾಳೆ ಸಮೇತ ಬಚ್ಚಲು ಮನೆಗೆ ಹೋಗುತ್ತಾಳೆ. ಮಗುವನ್ನು ಮಲಗಿಸಿದ ಹಾಳೆಯಲ್ಲಿ ಬಿಸಿ ನೀರನ್ನು ತುಂಬಿಸುತ್ತಾಳೆ. ಮಗು ಆ ಬಿಸಿ ನೀರಿನಲ್ಲಿ ಹಿತವನ್ನು ಅನುಭವಿಸುತ್ತಾ ಆಟ ಆಡುತ್ತಿರುತ್ತದೆ. ಹಾಳೆಯೊಳಗೆ ತುಂಬಿಸಿದ ನೀರು ತಣ್ಣಗಾದಾಗ ಪುನ: ಬಿಸಿ ನೀರು ತುಂಬಿಸಿ ಮಗುವಿನೊಂದಿಗೆ ತಾನಿದ್ದು ಸರಳಿ ಕೋಲಿನ 'ತಾಳಿ' ಯನ್ನು ತಲೆಗೆ ಹಚ್ಚಿ ತಿಕ್ಕುತ್ತಾ ಆಕೆ ಹಾಡುತ್ತಾಳೆ.

"ಕೀವು ಕೀವು ಕಿಮ್ಮೋರ, ಅಯ್ಯಾ ಮೋರಾ ದಶಮೋರಾ । ದಶಮೋರು ತನ್ನೇಲೊ

ಪಾಣಿ ಪೀಯಾ ಡೆವಿಲೊ (ಕೂತು ಕೊಂಡಿತು) । ಧರ್ರು ಕರುಂ ಭುರ್ರು ಕರುಂ ಬುಶೋಳಿ ಮೋರಾ"

ಚಿಕ್ಕ ನವಿಲು 'ಕೀವ್ ಕೀನ್' ಎಂದು ಕೂಗುತ್ತದೆ. ನವಿಲಿಗೆ ಬಾಯಾರಿಕೆಯಾಗುತ್ತದೆ. ನೀರು ಕುಡಿಯಲು ಇಳಿಯುತ್ತದೆ. ತಲೆಯಿಂದ ಸುರಿಯುತ್ತೇನೆ.

"ಆಚು ಪಾಚು ಕೆಕ್ಕಿಂಜೊ ಕೋಂಬು । ನಾರ್ಲ್ಲಾಚೊ ಪಿರ್ಲ್ಡೋ ಗಾಯಿಚ್ಯೊ ಪಡ್ಗೊ ಮೈಶಿಚ್ಯೊ ರೆಡ್ಡೊ ಕೆಕ್ಕೇಂ ಬೋಶ್, ಅಜಿನಾವೋರಿ ಬಡ್ಗೊ ।"

ಹೀಗೆ ಹಾಡುತ್ತಾ ಮಗುವಿನ ತಲೆಯಿಂದ ಬಿಸಿಬಿಸಿ ನೀರು ಹೊಯ್ದು ಸ್ನಾನ ಮಾಡಿಸುತ್ತಾಳೆ. ಶುಚಿಯಾದ ಬಟ್ಟೆಯಿಂದ ಮೈ ಒರಸಿ ಮಗುವಿಗೆ ಕಾಡಿಗೆಯ ಬೊಟ್ಟು ಇಟ್ಟು ತೊಟ್ಟಿಲಲ್ಲಿಟ್ಟು ತೂಗುತ್ತಾಳೆ. ಆಗ ಆಕೆ ಹಾಡುವ ಜೋಗುಳ ಹಾಡಿದು.

"ಜಯ್ಯಿರೇ ನಂದ। ಗೋಪಿ ಗೋವಿಂದಾ। ಅಧ್ಯಾನ ಸಂಗಾ । ದೂರ ದೇಶಾ ॥
ಅಪ್ಪಯಣಾ ಸಾನು। ತ್ಸಂಪಾಂತ್ಸೋ ವರ್ಣು। ಶೋಭೆಚ್ಚೊಮಾನು । ಸೌಂದರೀಲೊ॥
ಅಪ್ಪಾಮ್ಮಾಂತಿಯೇತುಜೆ ಗುಣ ಸೃಷ್ಟಿಯೇ। ಪಟ್ಟಣ ಶೆಟ್ಟಿಯಾ । ತುಜ ಪೋಟ ವಲೀ ಮೋಟ।
ಸಂಸಾರಿ ಚೇ ಕಷ್ಟ । ಬಂದಿಲೆ ವಲೀ ವೋಟ॥ ಜಯ್ಯಾಂಜಯೀ ಶಿಕನಾರಿ । ಘೇತಲೊಪಾಳ್ಕೆ ವೋರಿ।
ಹಗ್ಗಿಲ ತೊಂಡಾಂ ಭರಿ। ಬಾಳಾಚಾ ॥ ಜಯಿ ಜಯಿ ಬಾಳಾ । ಜಯಿ ಜಯೀ॥

ಮಗುವನ್ನು ಗೋಪಿ ಗೋವಿಂದ ಎಂದು ಸಂಭೋದಿಸಿ ನೀನಿನ್ನೂ ಸಣ್ಣವನು ಸಂಪಿಗೆ ವರ್ಣದವನು, ಸುಂದರವಾದ ನಿನಗೆ ಶೋಭಾಯಮಾನವಾದ ಮಾನವಿದೆ. ತಂದೆ ತಾಯಿಯ ಗುಣವೇ ನಿನ್ನದು. ಪಟ್ಟಣ ಶೆಟ್ಟಿಯಂತೆ ಹೊಟ್ಟೆ ನಿನ್ನದು. ಸಂಸಾರದ ಕಷ್ಟವು ನಿನ್ನ ಹೊಟ್ಟೆ ಕಟ್ಟುವಂತೆ ಮಾಡಿದೆ. ತೊಟ್ಟಿಲ ಮೇಲೆ ಹತ್ತಿ ಬಾಯಿಯಲ್ಲಿ ಹೇತ ಮಾಡಿದ ಎಂದೆಲ್ಲ ವಿವರಣೆ ಇಲ್ಲಿದೆ. ಇನ್ನೊಂದು ಜೋಗುಳ ಹಾಡು ಮುಂದಿನದಾಗಿದೆ.



"ಜಯಿ ಬಾಳಾ ಜಯಿ ನಾರ್ಲಾಚಿ ಸೋಯಿ। ಗೋಡ ಘನ್ನು ಕಲ್ಲುಂಚಿ, ಬಾಳಾಚ ತೊಂಡಾಂದೆವುಂಚಿ"
"ಬಾಬಾ ಅಂಬೆ ಪಿಕ್ಕಲ್ಲೆ ಅಂಬೆ । ಗೊಡ್ಡಲ್ಲೇ ಘರೆ ಹತ್ತಿಂದೇವು
ಹತ್ತಪಾಯಾಂ ಶಕ್ತಿ ದೀ ದೇವಾ ಲೋಕಾಂಚ ಟೊಕ್ಕುಳಾಂ ಪಡುನಕ್ಕ"

ಈ ಜೋಗುಳ ಹಾಡಿನಲ್ಲಿ ತಾಳೆಯಾಗದ ಶಬ್ದಗಳೇ ತುಂಬಿದೆ. ಕೆಲವು ಹಾಡುಗಳು ಅರ್ಥಪೂರ್ಣವಾಗಿದೆ. 'ಬಾಳಾ' ಎಂಬುದಾಗಿ ಮಗುವನ್ನು ಪ್ರೀತಿಯಿಂದ ತಾಯಿ ಸಂಬೋಧಿಸುತ್ತಾಳೆ. ತೆಂಗಿನ ತುರಿಯನ್ನು ಸ್ವಲ್ಪ ಹಿಂಡಿ ಕಾಯಿ ಹಾಲು ತೆಗೆದು ಉಳಿದ ಗಟ್ಟಿಯಾದ ತೆಂಗಿನ ತುರಿಗೆ ಬೆಲ್ಲ ಸೇರಿಸಿ ಕಲಸಿ ಮಗುವಿನ ಬಾಯಿಗೆ ಕೊಡಬೇಕು ಎಂದು ಒಂದು ಹಾಡಿನ ಅರ್ಥವಿದೆ. ಮತ್ತೊಂದು ಹಾಡಿನಲ್ಲಿ ಆಕೆ ತನ್ನ ಮಗುವಿನ ಕೈಕಾಲುಗಳಿಗೆ ಶಕ್ತಿ ಕೊಡು. ಇನ್ನೊಬ್ಬರ ಹಂಗಿಲ್ಲದೆ ಬಾಳು ಕೊಡು ಎಂದು ಪ್ರಾರ್ಥಿಸುತ್ತಾಳೆ.

ಮಗುವಿನ ಆಟ ತಾಯಿಗೆ ಆನಂದದಾಯಕವಾಗಿದೆ. ಮಗುವನ್ನು ಆಟ ಆಡಿಸುವಾಗ ತಾಯಿಯ ಬಾಯಿಂದ ಬರುವ ಹಾಡು ಹೀಗೆ ಇದೆ.

"ಅಡ್ಡಿಂ ಬಿಡ್ಡಿಂ ನವರಾ ಪಿಲ್ಲಂ । ಸಾತ ಪಿಲ್ಲಂ ಬಿಡ್ಡಿಂಚ್ಚಿಂ
ಬಿಡ್ಡಿಂ ಮೂಳ ಕೋಣೊಟ್ಟ ಡೋಳೊಟ್ಟ । ಹಡ್ಡಂ ಪಡ್ಡಂ ಕತ್ತರಿ ಮೋಡಿ
ಶೀರೋಳಿಚ್ಚಿ ಕಾಳ ಬೀಂಡೋಳುಚ್ಚೊ ಡೋಲು । ಕೊಣಾ ಪುಡೆ ಡುಮ್ಮುಕ್ಕುಲೊ" (ಯಾರಿಗೆ ಮೊದಲು ಗುದ್ದು)

ತಾಯಿ ಮಗುವಿನ ಎರಡೂ ಕೈಗಳ ಅಂಗೈಗಳನ್ನು ನೆಲದಲ್ಲಿ ಕವುಚಿಟ್ಟು ತಾನೂ ತನ್ನ ಎಡಕೈಯನ್ನು ಕವುಚಿ ಹಾಕಿ ಬಲದ ಕೈಯ ತೋರುಬೆರಳಿನಿಂದ ಮೂರು ಅಂಗೈಗಳನ್ನು ಸ್ಪರ್ಶಿಸುತ್ತಾ ಮುಂದುವರಿಯುತ್ತಾಳೆ.

ಮೇಲಿನ ಹಾಡನ್ನು ಹಾಡುತ್ತಾ ಹಾಡು ಮುಗಿಯುವಾಗ ಕೈಯನ್ನು ನೆಲ ಸ್ಪರ್ಶಿಸದಂತೆ ನೋಡಿಕೊಳ್ಳಬೇಕು. ಇಲ್ಲವಾದರೆ ತಾಯಿ ತನ್ನ ಎರಡೂ ಕೈಗಳನ್ನೂ ಮುಷ್ಟಿಯಾಕಾರದಲ್ಲಿ ಹಿಡಿದು ಮಗುವಿನ ಕೈಗಳಿಗೆ ಗುದ್ದುತ್ತಾಳೆ. ಆ ಗುದ್ದನ್ನು ಮಗು ತಪ್ಪಿಸಬೇಕು. ತಾಯಿಯ ಗುದ್ದಿನಿಂದ ತಪ್ಪಿಸಿಕೊಂಡಾಗ ಮಗುವಿಗೆ ಸಂತೋಷವಾಗುತ್ತದೆ. ಮಗು ಸಂತೋಷದಿಂದ ನಕ್ಕಾಗ ತಾಯಿಗೆ ಆನಂದವಾಗುತ್ತದೆ.

ತಾಯಿ ತನ್ನ ಮಗುವನ್ನು ಮಡಿಲಲ್ಲಿ ಕುಳ್ಳಿರಿಸಿ ಮಗುವಿನ ಅಂಗೈಯನ್ನು ತನ್ನ ಅಂಗೈಯೊಳಗಿಟ್ಟು ಎರಡು ಬೆರಳುಗಳಿಂದ ಅಂಗೈಯಿಂದ ಮೇಲಕ್ಕೆ ಹುಳ ಹೋದ ಹಾಗೆ ಮುಂದುವರಿಯುತ್ತಾ ಕಂಕುಳ ಭಾಗಕ್ಕೆ ಬಂದಾಗ ಮಗುವಿಗೆ ಕಳಗುಳಿ ಇಟ್ಟು ನಗಿಸುತ್ತಾಳೆ. ತಾಯಿ

ಮಗುವನ್ನು ನಗಿಸಿ ವ್ಯಾಯಾಮ ಮಾಡಿಸುವ ಕಲೆ ತಾಯಂದಿರಿಗೆ ಕರಗತ

"ಅತ್ತಾಳಿ ಪತ್ತಾಳಿ ಷೆಜ್ಜುಕ ಮೆಜ್ಜುಕ । ಅಂಗ ಮಾಂಗ ಅತ್ತಲ್ಲಂ ಪತ್ತಲಂ ಮಮ್ಮಾಕಂ ಪತ್ತಲಂ
ಮಮ್ಮಾಥಾ ಉಜ್ಜಾರಾಣಿ ಪತ್ತಲ್ಲಂ.। ಮಮ್ಮಾಥಾ ಘೋರೋ ಬಿತರಿ ಪತ್ತಲಂ
ಹಗ್ಗುಂ ಘಾನ್ನು ಮುತ್ತುಂ ಘಾನ್ನುಂ । ಬೋಶ್‌ಕರ್ ಯೋ"

(ಹಾಡಿನ ಮೊದಲ ಪದಗಳು ಸಂದಿಗ್ಧವಾಗಿವೆ. ಮುಂದಿನ ಸಾಲುಗಳಲ್ಲಿ ಮಾವನ ಮನೆಗೆ ತಲಪಿದೆವು. ಮಾವನ ನೀರಿನ ಒಸರಿರುವಲ್ಲಿ ತಲಪಿದೆವು. ಮಾವನ ಮನೆಯೊಳಗೆ ತಲಪಿದೆವು ಹೇತ, ಮೂತ್ರ ಮಾಡಿ ಸ್ನಾನ ಮಾಡಿ ಬಾ) ಇನ್ನೊಂದು ಆಟದ ಹಾಡು ಹೀಗಿದೆ

"ಲಡ್ಡು ಕರಿಗೆ ಅಮ್ಮಯ್ಯೇ। ಪೀಠ ಖಂಡು ಬಳಬಯ್ಯೆ। ಲಡ್ಡು ಖಂತ್ತ ಭಾಗದ। ಶೇವಯ್ಯೆ। ಖಂತಾ ಲಾಗದ। ಶೇವಯಿ ಖಲ್ಲಿ ದೇಡಿ ಬಾಳಲಾಗಲಿ ಕೀಡಿ"

ವಿಶ್ಲೇಷಣೆ: ಲಡ್ಡು ಮಾಡು ಅಮ್ಮಯ್ಯೆ ಹಿಟ್ಟು ಮಾಡಿ ಕಳಿಸುತ್ತೇನೆ. ಲಡ್ಡು ತಿಂದು ಆರೋಗ್ಯ ಹಾಳಾದೀತು. ಅಕ್ಕಿಯ ಸೇಮಿಗೆ ತಿಂದು ಅಜೀರ್ಣವಾದೀತು. ಸೇಮಿಗೆ ಒಂದುವರೆ ತಿಂದನು. ಮಗುವಿಗಾಯಿತು ಹುಳ. ಮಗು ಈ ಗೀತೆ ಹಾಡಿದಾಗ ಎರಡೂ ಕೈಯಿಂದ ಲಡ್ಡುಮಾಡುವ ಅನುಕರಣೆ ಮಾಡುತ್ತದೆ. ಅದು ನೋಡುವುದಕ್ಕೆ ಎಲ್ಲರಿಗೆ ಚಂದ.

"ಕುರು ಭತ್ತಾ ವರು ಏಕು ದುಧ್ಧಿ। ಕುಣ್ಣಲಣ್ಣ ಖ್ಯೆಂ ಗೆಲ್ಲೊ ವರಾ ಏಕಿ ಬುದ್ಧಿ"

ತನ್ನ ಮಗುವಿನ ತುಂಟಾಟವನ್ನು ಅರಿತ ತಾಯಿ ಮಗು ಕಣ್ಣಿಗೆ ಬೀಳದಿದ್ದಾಗ ಮಗುವಿನ ಬಗ್ಗೆ ಆಕೆಗೆ ಕಾಳಜಿ ಉಂಟಾಗುತ್ತದೆ. ಆಕೆ "ಸಣ್ಣ ಅಣ್ಣ ಎಲ್ಲಿ ಹೋದಿ. ನಿನಗೆ ವರ್ಷಕ್ಕೆ ಒಂದು ಬುದ್ಧಿ" ಗದರಿಸುತ್ತಾ ಎಂದು ಮಗುವನ್ನು ಹುಡುಕುತ್ತಾ ಮಗುವಿನ ತುಂಟಾಟವನ್ನು ತಿಳಿಕೋಪದಿಂದ ವ್ಯಕ್ತಪಡಿಸುತ್ತಾಳೆ. ಈ ಹಾಡಿನ ಮೂಲಕ ವರ್ಷ ವರ್ಷಕ್ಕೂ ತನ್ನ ಬುದ್ಧಿಯನ್ನು ಮಾರ್ಪಡಿಸುವ ಮಗುವಿನ ಬಗ್ಗೆ ಆಕೆ ನಸುಕೋಪಿಸಿದರೂ ಹೆಮ್ಮೆ ಇದೆ.

ತಾಯಿ ಮಗುವನ್ನು ತೊಟ್ಟಿಲಲ್ಲಿಟ್ಟು ತೂಗುವಾಗ ಹಾಡುವ ಇನ್ನೊಂದು ಲಾಲಿ ಹಾಡು ಇದಾಗಿದೆ.

"ಜಯಿರೇ ಬಾಳ ಖ್ಯೆಂ ಗೆಲ್ಲೋ ದೂರಾ । ಉಲ್ಲದೇವೂಂ ಘರಾ ಅಪ್ಪೋಂ ಹಾಡ್ಯಾ
ಅಪ್ಪಾಯಾ ಸಂಗಿಲಂ ಮಾಮ್ಮೇನ । (ಧವೊ) ಗೋರೋ ಬಾಳು ಎಂತಲೊ ಜನ್ನೇನ (ತೋಟದಿಂದ)

"ಗೋರೋ ಬಾಳು ಘೋರೊಂ ಪಡ । ನಿರ್ಮಲ ಚಿತ್ತಂ ಭೂಯಿಂ ಪಡ
ಅಪ್ಪಯ್ಯನಿಗೆ ಮಾವನು ಹೇಳಿದನು,
ತೋಟದಿಂದ ಮಗು ಬಂದೀತು.
ಬಿಳಿ ಮಗುವೇ ಒಳಗೆ ಬೀಳು ನಿರ್ಮಲ ಮನಸ್ಸಿನವನೇ ಭೂಮಿಯಲ್ಲಿ ಬೀಳು"

"ಪಲ್ಲಕಿಯಾಂ ಹೋಡು । ಪಕ್ಷಿಯಾಂ ಗರುಡು
ಹಲ್ಲ್ಯೆತಾಂ ಉಜ್ವಾಡು। ಗೋರೋ ಬಾಳಾ
ತೂ ವೆಗ್ಗಿಂ ವಾಢ। ದೀವಿಂಚೆ ಮಾಡ ಅಂಜಣಾನ್ನು
ಅಂಜಣೇ ಮಾಡು ಗೆಂದಾಳೊ । ಅಂಥೊರೊ ಬಾಳು । ಕುಟುಂಬಿ ಆಳು"

ಇಂತಹ ಜೋಗುಳ ಹಾಡುಗಳು ಕರ್ವಾಡ ಭಾಷೆಯಲ್ಲಿ ಸಾಕಷ್ಟು ಇವೆ. ಇವೆಲ್ಲ ಪ್ರಾಸಯುಕ್ತವಾಗಿದ್ದು ಅರ್ಥಪೂರ್ಣವಾಗಿದೆ. ಮಕ್ಕಳ ತೊದಲು ನುಡಿಯ ಬಾಲಿಶ ಭಾಷೆಯು ಇಲ್ಲಿ ರಾಗಯುಕ್ತವಾಗಿ ಹಾಡಿದಾಗ ಮಗು ಆ ಹಾಡಿನ ಏಕತಾನತೆಗೆ ನಿದ್ದೆ ಹೋಗುತ್ತದೆ.

ಇಂತಹ ಜೋಗುಳ ಹಾಡುಗಳ ಔಪಯೋಗಿಕ ಮೌಲ್ಯ ಮಗುವನ್ನು ಸುಖನಿದ್ರೆಗೆ ತಟ್ಟುವುದೇ ಆಗಿದೆ. ತಾಯಿಯ ವಾತ್ಸಲ್ಯಭಾವ, ಮಗುವಿನ ತುಂಟಾಟ, ಹಠಮಾರಿತನ ಹಾಡಿನುದ್ದಕ್ಕೂ ಕೆನೆಗಟ್ಟಿವೆ.

ತಾಯಿ ಮಗುವಿಗೆ ಅಂಬಲಿಯನ್ನು ಆಹಾರವಾಗಿ ಕೊಡುತ್ತಾಳೆ. ಕೆಲವೊಮ್ಮೆ ಆ ಅಂಬಲಿ ಸ್ವಲ್ಪ ನೀರಾಗಿ ಬಿಟ್ಟರೆ ಬಾಯಿಂದ ಹೊರೆಗೆ ಚೆಲ್ಲಿಬಿಡುತ್ತದೆ. ಹದವಾಗಿದ್ದರೆ ಬಾಯಿಗೆ ಕೊಟ್ಟಾಕ್ಷಣ ನುಂಗುತ್ತದೆ. ಅದಕ್ಕೆ ರುಚಿಯಾಗದಿದ್ದರೆ ಬಾಯಿಯಿಂದ "ಭುರ್‌ರ್‌ರ್" ಮಾಡಿ ತಾಯಿಯ ಮುಖಕ್ಕೇ ಸಿಂಚನ ಮಾಡುತ್ತದೆ. ಆಗ ತಾಯಿ

"ಅಂಬಲಿ ಪತ್ತಳಿ ದಲ್ಲಿಕಿ ಬಾಳಾ । ಕಂರ್ಬಲಿಚ್ಚೆ ಖೊಲ್ಲ್ಯೆ
ಫುಳ್ಳೆನ ಮಗ್ಗಿಲೆ ಎಂತಣ ಬಾಳಾ ಭೈಣಿ ಕನ್ನಾ ರ್ಝೊರ್ಲ್ಲೆ"

ಎಂದು ರಾಗದಿಂದ ಹಾಡುತ್ತಾಳೆ. ತನ್ನ ತಪ್ಪಿನ ಅರಿವು ತಾಯಿಗಾಗಿ ಕಷ್ಟದಿಂದ ಅಂಬಲಿಯನ್ನು ಮಗುವಿಗೆ ಕುಡಿಸುತ್ತಾಳೆ. ಹದವಾಗಿರಬೇಕಾಗಿದ್ದ ಅಂಬಲಿ ತೆಳುವಾಗಿದೆ. ಕಯ್ಯಿಂದಂತೂ ಬಾಯಿಗೆ ಕೊಡಲು ಕಷ್ಟವಾಗುತ್ತದೆ. ಕಂರ್ಬಲ ಎಂಬ ಎಲೆಯಿಂದ ತೆಳುಪದಾರ್ಥವನ್ನು ಕುಡಿಯಲು ಸಾಧನವೊಂದನ್ನು ಮಾಡಿ ಕುಡಿಸುವ ಪರಿಪಾಠವಿರುವುದನ್ನು ನೆನಪಿಸುತ್ತಾಳೆ.

ಇಲ್ಲಿ 'ರ್ಝೊರ್ಲ್ಲೆ' ಎಂಬ ಶಬ್ದದ ಅರ್ಥ ಕರ್ವಾಡ ಭಾಷೆಯಲ್ಲಿ 'ಜಿರಳೆ' ಎಂದಾಗಿದೆ. ಇಲ್ಲಿ ಜಿರಳೆಯಂತೆ ತೆಳುವಾದ ಜೋಲುವ ಆಭರಣವೊಂದು ತಂಗಿಯ ಕಿವಿಗೆ ನೇತಾಡುತ್ತಿದ್ದುದನ್ನು ಈ ಸಂದರ್ಭದಲ್ಲಿ ನೆನಪಿಸುತ್ತಾಳೆ.

ಇಂತಹ ಪ್ರಾಸಯುಕ್ತವಾದ, ಅರ್ಥಪೂರ್ಣವಾದ ಶಿಶುಗೀತೆಗಳು ಕರ್ವಾಡಿ ಭಾಷೆಯಲ್ಲಿ ಸಾಕಷ್ಟು ಸಿಗುತ್ತದೆ. ಈ ರಚನೆಗಳೆಲ್ಲ ಬಲು ಸೊಗಸಾಗಿದೆ. ಅಲ್ಲಲ್ಲಿ ಶಬ್ದ ಗಾಂಭೀರ್ಯ ಕಂಡು ಬರುತ್ತದೆ. ಬಾಂಧವ್ಯದ ಬೆಸುಗೆ ಕೆಲವು ಕಡೆ ದಟ್ಟವಾಗಿರುವುದನ್ನು ಗುರುತಿಸಬಹುದು. ದಿನಬಳಕೆಯಲ್ಲಿ ಇಂದು ಕಣ್ಮರೆಯಾದ ಹಲವಾರು ಶಬ್ದಗಳು ಇಂತಹ ಶಿಶುಗೀತೆಗಳಲ್ಲಿ ಗುರುತಿಸಲು ಸಾಧ್ಯ. ಒಟ್ಟಿನಲ್ಲಿ ಕರ್ವಾಡ ಸಂಸ್ಕೃತಿಯ ಭಾಗವಾಗಿ ಬಂದ ಈ ಶಿಶುಗೀತೆಗಳು ಜನಪದ ಸಾಹಿತ್ಯವನ್ನು ಶ್ರೀಮಂತಗೊಳಿಸಿದೆ.

* * *

## ಅಧ್ಯಾಯ – ೫

### ಲಿಖಿತ ಪರಂಪರೆಯಲ್ಲಿ ಕರ್ಾಡ ಭಾಷಾ ಸಾಹಿತ್ಯ

ಅಧ್ಯಾಯ–೫

# ಲಿಖಿತ ಪರಂಪರೆಯಲ್ಲಿ ಕರ್‍ಹಾಡ ಭಾಷಾ ಸಾಹಿತ್ಯ

## ೫.೧ಕರ್‍ಹಾಡ ಭಾಷಾ ಸಾಹಿತ್ಯ

ಕಾವ್ಯ ಸಮುದಾಯ ಸಾಹಿತ್ಯದ ಬಹು ಮುಖ್ಯ ಭಾಗ. ಸಾಹಿತ್ಯ ಮಾನವನಿಗೆ ಆನಂದವನ್ನು ಕೊಡುತ್ತದೆ. ಮನೋವಿಕಾಸಕ್ಕೆ ಮತ್ತು ಭಾವಕೋಶ ಅಭಿವೃದ್ಧಿಗೆ ಅವಕಾಶ ಮಾಡಿಕೊಡುತ್ತದೆ. ಜೀವನದಲ್ಲಿ ಉಲ್ಲಾಸವನ್ನು ತರುತ್ತದೆ.

ಕರಾಡ ಭಾಷೆಯಲ್ಲಿ, ವಿಶೇಷವಾದ ಸಾಹಿತ್ಯ ಸೃಷ್ಟಿ ಆಗಲಿಲ್ಲವೆಂದೇ ಹೇಳಬೇಕಾಗುತ್ತದೆ. "ಪರಂಪರೆಯಿಂದ ಕಂಠಸ್ಥವಾಗಿ ಬಂದ ಜಾನಪದ ಶೈಲಿಯ ಕೆಲವು ಸ್ತೋತ್ರಗಳು, ಮದುವೆಯ ಹಾಡುಗಳು, ಶೋಭಾನೆಗಳು ಹಾಗೂ ಗಾದೆಯ ಮಾತುಗಳನ್ನು ಬಿಟ್ಟರೆ ಬೇರೆ ಯಾವ ಸಾಹಿತ್ಯವೂ ಇಲ್ಲ" ಎಂದು ವಿದ್ವಾನ್ ವೆಂಕಟೇಶ ಭಟ್ಟ, ಸಜಂಕಿಲ ಇವರು 1986 ರಲ್ಲಿ ಪ್ರಕಟಿತ "ಕರ್‍ಹಾಡ ಸ್ಮರಣ ಸಂಚಿಕೆ"ಯಲ್ಲಿ ಬರೆದಿದ್ದಾರೆ. ಬಾಯ್ದೆರೆಯಾಗಿ ಬಂದಿರುವ ಇಂತಹ ಲಬ್ಧ ಸಾಹಿತ್ಯವನ್ನು ಇದೇ ಸ್ಮರಣ ಸಂಚಿಕೆಯಲ್ಲಿ ಮುದ್ರಿಸಿ ಗ್ರಂಥಸ್ಥ ರೂಪವನ್ನಿತ್ತರು ಶ್ರೀ ಪೆರ್ಲ ಕೃಷ್ಣ ಭಟ್ಟರು. ಕೆಲವು ಕರ್‍ಹಾಡ ಭಾಷೆಯ ಹೊಸ ಕವಿತೆಗಳೂ ಇದರಲ್ಲಿ ಸ್ಥಾನ ಪಡೆದಿವೆ.

ಕರಾಡಿಯನ್ನು ಮರಾಠಿಯಂತೆ ಸಂಸ್ಕೃತ ಲಿಪಿಯಲ್ಲೇ ಬರೆಯಬೇಕೆಂದೇನೂ ಇಲ್ಲ. ಹಿಂದೆ ಕರ್ನಾಟಕವು ಕಾವೇರಿಯಿಂದ ಗೋದಾವರಿವರೆಗೆ ಹಬ್ಬಿ, ಅತಿ ವಿಶಾಲವಾಗಿತ್ತು. ಆಗ ಆ ರಾಜ್ಯದೊಳಗೆ ಆಂಧ್ರದ ಸ್ವಲ್ಪ ಅಂಶವೂ, ಮಹಾರಾಷ್ಟ್ರ ಹಾಗೂ ಕೊಂಕಣಗಳೂ ಸೇರಿದ್ದವು. ಆ ಪ್ರದೇಶದಲ್ಲಿ, ಎಲ್ಲಾ ಜನರು ತಮ್ಮ ಭಾಷೆಯನ್ನು ಬರೆಯಲು, ಬ್ರಾಹ್ಮಿಯ ದಕ್ಷಿಣೀ ರೂಪಾಂತರವಾದ, ಆಂಧ್ರೀ ಲಿಪಿಯನ್ನು ಬಳಸುತ್ತಿದ್ದರು. ಕೊನೆಗೆ ಆಂಧ್ರೀವರ್ಣಮಾಲೆಯು, ಇನ್ನಷ್ಟು ಸುಧಾರಿಸಿ, ಇಂದಿನ ಸುಂದರವಾದ ಕನ್ನಡದ್ದೆಂದು ತಿಳಿಯಲಾಗುವ ವರ್ಣಮಾಲೆಯು, ಸಾಧಾರಣ ಹದಿನೈದನೆಯ ಶತಮಾನದ ಕೊನೆವರೆಗೆ, ವಿಜಯ ನಗರ ಕಾಲದಲ್ಲಿ ಬಳಕೆಗೆ ಬಂದು ಮುಂದುವರಿಯಿತು. ಅದಕ್ಕೆ ಹಿಂದೆ, "ಬ್ರಾಹ್ಮಿ ಲಿಪಿ" ಮತ್ತು "ನಾಗರಿ ಲಿಪಿ" ಬಳಕೆಯಲ್ಲಿತ್ತು. ಈಗಿನ ಕನ್ನಡವೆನ್ನುವ ಲಿಪಿಗೆ ಸಮೀಪತರವಾದ, ಲಿಪಿಯಿಂದಲೇ ಬರೆಯಲಾಗುತ್ತಿತ್ತು. ಹಾಗಾಗಿ ಕರಾಡಿಗೆ ಕನ್ನಡದ ಲಿಪಿಯನ್ನು ಬಳಸುವುದು ಸಮಂಜಸವೂ, ಯುಕ್ತವೂ ಆಗಿದೆ. ಕೊಂಕಣಿ, ತುಳುವಿಗೂ ಕನ್ನಡದ ಲಿಪಿಯನೇ ಬಳಸಲಾಗುತ್ತದೆ.

ಕರಾಡಿಯನ್ನು ಕನ್ನಡ ಲಿಪಿಯಲ್ಲೇ ಬರೆಯುವುದು ವಿಹಿತ. ಹೆಚ್ಚಾಗಿ ಎಲ್ಲರಿಗೂ, ಓದಲು, ಬರೆಯಲು, ಮಾತನಾಡಲು ಬರುವುದರಿಂದ, ಕರ್ನಾಟಕ ಲಿಪಿ ಉಪಯೋಗಿಸಲು ಕಾರಣವೂ ಆಗಿದೆ.

ಕರ್‍ಹಾಡ ಭಾಷೆಯ ಉಚ್ಚಾರ ವಿಶಿಷ್ಟವಾದುದು. ಕನ್ನಡ ಲಿಪಿಯಲ್ಲಿ ಬರೆಯುವಾಗ 'ವಿಶಿಷ್ಟ ಉಚ್ಚಾರ ವನ್ನು ಬರವಣಿಗೆಯಲ್ಲಿ ಅಳವಡಿಸಲು ಯತ್ನಿಸಲಾಗಿದೆ. "ಪ್ರತಿಯೊಂದು ಭಾಷೆಯ ಶಬ್ದಗಳಿಗೆ ತನ್ನದೇ ಆದ ಪ್ರತ್ಯೇಕ ಉಚ್ಚಾರವಿರುತ್ತದೆ. ಉಚ್ಚಾರವು ಕೆಲವು ಕಡೆ, ಅಕ್ಷರ ವಿನ್ಯಾಸದಂತೆ ಇರದೆ, ಬೇರೆಯೇ ರೀತಿ ಯಲ್ಲಿರುತ್ತದೆ. ಬರವಣಿಗೆ ಹಾಗೂ ಉಚ್ಚಾರದಲ್ಲಿ ವ್ಯತ್ಯಾಸವಿರುತ್ತದೆ. ಅದನ್ನು ಬರವಣಿಕೆಯ ಮೂಲಕ ತಿಳಿಯುವುದು ಯುಕ್ತವಾಗಲಾರದು. ಬಹುಭಾಷಾವಿದ ಶ್ರೀ ಉ. ಲಕ್ಷ್ಮೀನಾರಾಯಣ ಕಿಣಿಯವರ ಮಾತು ನಿಜ.

೫.೨.೧ ಕರ್ಹಾಡ ಭಾಷಾ ಸಾಹಿತ್ಯ ರಚನಕಾರರು

ಮೊತ್ತ ಮೊದಲು ಪಡ್ರೆ ಗುರು ಶ್ರೀಪತಿ ಭಟ್ಟರು ಕರ್ಹಾಡ ಭಾಷೆಯಲ್ಲಿ ಸಾಹಿತ್ಯ ರಚನೆ ಮಾಡಿದಂತೆ ಕಂಡು ಬರುತ್ತದೆ. ಇವರನ್ನು "ಕರ್ಹಾಡ ಸಾಹಿತ್ಯದ ವಾಲ್ಮೀಕಿ" ಎಂದು ಹೆಸರಿಸಿದರೆ ತಪ್ಪಾಗದು. 'ಪ್ರಹ್ಲಾದ ಚರಿತ್ರೆ' ಎನ್ನುವ ಹರಿಕಥೆ, 'ಸ್ವಾಗತಗೀತ', 'ಹೊರತು ಬೈಸರ್ಲಂ ಗಾಂದ್ರ', 'ಬಾಗಿಲ ಅಡ್ಡೆಲ್ಲಂ ಗಾಂದ್ರ' ಎಂಬ ಮೂರು ಶೋಭಾನೆ ಹಾಡುಗಳನ್ನು ಬರೆದಿದ್ದಾರೆ. ಇವೆಲ್ಲವೂ 'ಕರ್ಹಾಡ'ದಲ್ಲಿ ಮುದ್ರಣಗೊಂಡಿವೆ.

'ಕರ್ಹಾಡ ಸೌಹಾರ್ದ ಸಂದೇಶ'ದಲ್ಲಿ ಪ್ರಕಟವಾದ ನಾಟಕ 'ರುಪಯ್ಯಾಂ ಹರ್ಡಿ' 'ಕನ್ಯಪುಂದಿಲಂ ಗಾಂದ್ರ' ಎನ್ನುವ ಶೋಭಾನಯೂ ಪೆರ್ಲ ಕೃಷ್ಣ ಭಟ್ಟರಿಂದ ರಚನೆಗೊಂಡಿದೆ. ಡಾ। ಡಿ. ಸದಾಶಿವ ಭಟ್ಟರು 'ಅಮೃತವರ್ಷಿಣಿ' ಮತ್ತು 'ಕವನಾಂ ಸೋರು' ಎನ್ನುವ ಎರಡು ಭಾವಗೀತೆಗಳ ಸಂಕಲನವನ್ನು ಬರೆದು ಪ್ರಕಟಿಸಿದ್ದಾರೆ. 'ಪಾರ್ಥ ಪ್ರತಿಜ್ಞೆ' ಎಂಬ ಯಕ್ಷಗಾನ ಧ್ವನಿಸುರುಳಿಯೊಂದನ್ನು ಹೊರತಂದಿದ್ದಾರೆ. "ಆವಳ ಶ್ರೀ ದುರ್ಗಾಪರಮೇಶ್ವರೀ ಸುಪ್ರಭಾತಣೆ- ಭಕ್ತಿಗೀತ" – ಇದು ಧ್ವನಿಸುರುಳಿಯಾಗಿದೆ. ಇವಲ್ಲದೆ ಇವರು ಬರೆದ ಚುಟುಕು ಸಾಹಿತ್ಯವನ್ನೂ ಅಪ್ರಕಟಿತ ಸಂಗೀತ ನಾಟಕವನ್ನೂ ಅಧ್ಯಯನಕ್ಕೆ ತೆಗೆದುಕೊಳ್ಳಲಾಗಿದೆ ರಾಮಣ್ಣ ಚೆನ್ನಾಂಗೋಡು ಅವರ ಚುಟುಕುಗಳು ಮಧುಪಡ್ರೆ, ಕೊಮುಂಜೆ ವೆಂಕಟ ಸುಬ್ಬರಾಯ, ರಾಧಾಕೃಷ್ಣ ಭಟ್ಟ ಕುರುಮುಜ್ಜಿ ಇವರ ಚುಟುಕುಗಳು ಶಿಷ್ಠ ಸಾಹಿತ್ಯದಲ್ಲಿ ಅಡಕವಾಗಿವೆ. ಸೈಪಂಗಲ್ಲು ಹೊಸ ಮನೆ ಶ್ರೀ ವಾಸುದೇವ ಭಟ್ಟರು ಬರೆದ 'ಪಂಚವಟಿ – ಖರಾಸುರವಧೆ'. ಯಕ್ಷಗಾನ ಪ್ರಸಂಗದಿಂದ ಆಯ್ದ ಕೆಲವು ಪದ್ಯಗಳು, 'ನಾಗ' ವೆಲ್ಲಂಜಿ ಬರೆದ 'ಮಜ್ಜತ್ತುಲ್ಯಾಕ' (ಸ್ವಗತ) ಎಂಬ ಕವನ, ಮಾ.ಭ. ಪೆರ್ಲ ಬರೆದ ಕೆಲವು ಚುಟುಕುಗಳನ್ನು ಈ ಲಿಖಿತ ಸಾಹಿತ್ಯದಲ್ಲಿ ಅಧ್ಯಯನ ಮಾಡಲಾಗಿದೆ. ಇನ್ನು ಕೆಲವು ಅಪ್ರಕಟಿತ ನಾಟಕಗಳು ಇದರಲ್ಲಿ ಸೇರಿವೆ. ಶ್ರೀಮತಿ ಸಂಧ್ಯಾಗೀತ, ಗಿರಿ ಅವರ ಸಣ್ಣ ಕತೆ 'ಬಾಂಧವ್ಯ' ಇಲ್ಲಿದೆ. 'ಶಿವ ಪಡ್ರೆ' ಕಾವ್ಯ ನಾಮದ ಶ್ರೀ ಶಿರಂತಡ್ಕ ವಾಸುದೇವ ಭಟ್ಟರ ಕವಿತೆಗಳು ಮತ್ತು ಜಯಶ್ರೀ ಎಸ್. ಪೆರ್ಲ ಇವರ 'ಯಾ ಮಗ್ಗಿಲೆಂ' (ಹಿಂದಕ್ಕೆ ಬನ್ನಿ) ಎನ್ನುವ ಕವನವನ್ನು ಅಧ್ಯಯನಕ್ಕೆ ಒಳಪಗಿಸಲಾಗಿದೆ.

೫.೨.೨ ಪ್ರಹ್ಲಾದ ಚರಿತ್ರ (ಹರಿಕಥಾರೂಪೇನ-ಚಂಪೂಕಾವ್ಯ) (ಗುರು ಶ್ರೀಪತಿ ಶಾಸ್ತ್ರಿ)

ದಿ। ಪಡ್ರೆ ಗುರು ಶ್ರೀಪತಿ ಶಾಸ್ತ್ರಿಗಳು : ಕರ್ಹಾಡ ಸಮಾಜದಲ್ಲಿ ಯಕ್ಷಗನ ಕಲೆಯ ಹೆಸರೆತ್ತಿದರೆ ಕೇಳಿ ಬರುವ ಮೊದಲ ಹೆಸರು ದಿ। ಪಡ್ರೆ ಗುರು ಶ್ರೀಪತಿ ಶಾಸ್ತ್ರಿ, ಗುರು ಕೇಶವ ಭಟ್ಟ- ಶ್ರೀಮತಿ ಸಾವಿತ್ರಿ ದಂಪತಿಗಳ ಕೊನೆಯ ಪುತ್ರನಾಗಿ ಜನಿಸಿದ ಶಾಸ್ತ್ರಿಗಳು ಪಾಂಡಿತ್ಯ, ಪ್ರತಿಭೆ, ಸದಾಚಾರ, ವಿನಯ ಸಂಪತ್ತಿನಿಂದ ಖ್ಯಾತರಾಗಿದ್ದರು. ಸಂಸ್ಕೃತದಲ್ಲಿ ಅಸಾಮಾನ್ಯ ಪಾಂಡಿತ್ಯ, ಪುರಾಣ ಧರ್ಮಶಾಸ್ತ್ರಗಳಲ್ಲಿ ಆಳವಾದ ಜ್ಞಾನ, ಕರ್ಹಾಡ ಮತ್ತು ಕನ್ನಡ ಭಾಷೆಗಳ ಮೇಲೆ ಹಿಡಿತ ಇವರಿಗೆ ಸಿದ್ಧಿಸಿದೆ.

ಪಡ್ರೆ, ಶ್ರೀಪತಿ ಶಾಸ್ತ್ರಿಗಳ ಕಾಲದಲ್ಲಿ 'ಪಡ್ರೆ ಕುಮಾರ ಯಕ್ಷಗಾನ ಮಂಡಳಿ' ಸ್ಥಾಪನೆಗೊಂಡಿತ್ತು. ಶಾಸ್ತ್ರಿಗಳು ಮಂಡಳಿಯನ್ನು ನಡೆಸುತ್ತಿದ್ದರು. ಕರ್ಹಾಡ ಭಾಷೆಯಲ್ಲಿ ಶೋಭಾನೆ (ಗಾಂದ್ರ) ಗಳನ್ನು ಬರೆದ ಇವರು "ಶ್ರೀ ಮೂಕಾಂಬಿಕಾ ಸ್ತೋತ್ರ' ಎಂಬ ಸಂಸ್ಕೃತ ಸ್ತೋತ್ರ ಸಂಗ್ರಹಕ್ಕೆ ಸಂಸ್ಕೃತದಲ್ಲಿ ವ್ಯಾಖ್ಯಾನವನ್ನು ರಚಿಸಿದರು. ತಮ್ಮ ನಲವತ್ತೈದನೆಯ ವಯಸ್ಸಿನಲ್ಲಿ, ಬಹಳ ಸಣ್ಣ ಪ್ರಾಯದಲ್ಲಿ ಅವರು ಅಕಾಲ ಮೃತ್ಯುವಿಗೆ ತುತ್ತಾದರು.

೫.೨.೩ ಪ್ರಹ್ಲಾದ ಚರಿತ್ರೆ

ಪ್ರಹ್ಲಾದ ಚರಿತ್ರೆಯು ಭಾಗವತದ ಪ್ರಸಿದ್ಧ ಕತೆ. ಈ ಕತೆಯನ್ನು ಆರಿಸಿಕೊಂಡು ಹರಿಕಥಾ ರೂಪದಲ್ಲಿ 'ಪ್ರಹ್ಲಾದ ಚರಿತ್ರ"ವನ್ನು ಚಂಪುವಿನಲ್ಲಿ ಬರೆದಿದ್ದಾರೆ. ಹರಿಕಥೆಗನುಗುಣವಾಗಿ ಪೀಠಿಕೆಯಲ್ಲಿ ಹರಿಭಕ್ತಿಯ ಪ್ರಾಧಾನ್ಯವನ್ನು ಒತ್ತಿ ಹೇಳಿ ಮುಂದೆ ಕಥಾರಂಭವಾಗುತ್ತದೆ. ಹಿರಣ್ಯಕಶಿಪು, ಹಿರಣ್ಯಾಕ್ಷರ ಜನನ, ಹಿರಣ್ಯಾಕ್ಷ ವಧೆ, ದಿತಿಯ ರೋದನ, ಹಿರಣ್ಯ ಕಶಿಪುವಿನಿಂದ ಸಾಂತ್ವನ, ತಾಯಿಯ ಅಭಿಮತದಂತೆ ಹಿರಣ್ಯ ಕಶಿಪುವಿನ ತಪಸ್ಸು, ಬ್ರಹ್ಮನಿಂದ ವರ ಪ್ರಾಪ್ತಿ, ದ್ವಿಗ್ವಿಜಯ, ಕಯಾದು ವಿವಾಹ, ಅವಳಲ್ಲಿ ನಾರದೋಪದೇಶದಿಂದ ಹರಿಭಕ್ತನಾದ ಪ್ರಹ್ಲಾದನ ಜನನ, ಚಂಡಾಮರ್ಕರ ಮೂಲಕ ವಿದ್ಯಾಭ್ಯಾಸ, ಪ್ರಹ್ಲಾದನ ಹರಿಭಕ್ತಿ ಪಾರಮ್ಯ, ವಿವಿಧ ರೂಪಗಳಿಂದ ಪ್ರಹ್ಲಾದ ವಧೆ ಪ್ರಯತ್ನ – ಇವಿಷ್ಟು ಶ್ರೀಪತಿ 'ಶಾಸ್ತ್ರಿಗಳು ಕಟ್ಟದ ಕಥಾ ಹಂದರ.' ಅನಂತರದ ನರಸಿಂಹಾವತಾರ ಮತ್ತು ಹಿರಣ್ಯಕಶಿಪುವಿನ ಸಂಹಾರ ಪ್ರಸಂಗವನ್ನು ಬೊಳಂಜಡ್ಕ ಶ್ರೀ ಗಣಪತಿ ಭಟ್ಟರು ಬರೆದು ಪೂರ್ಣಗೊಳಿಸಿದ್ದಾರೆ.

ಈ ಕೃತಿಯಲ್ಲಿ ಶಾರ್ದೂಲ ವಿಕ್ರೀಡಿತದ ಐದು ವೃತ್ತಗಳು ವಸಂತ ತಿಲಕದ ಆರು ವೃತ್ತಗಳು, ಇಂದ್ರವಜ್ರಾ ಒಂದು, ಅನುಷ್ಟುಪ್ ವೃತ್ತ ಮೂರು ಇವೆ. ಬೊಳಂಜಡ್ಕ ಗಣಪತಿ ಭಟ್ಟರು ಬರೆದ ಕೊನೆಯ ಭಾಗದಲ್ಲಿ ಶಾರ್ದೂಲ ವಿಕ್ರೀಡಿತ ವೃತ್ತ ಎರಡು ಇವೆ. ಇವರು ಬರೆದ ರಾಗತಾಳ ಪದ್ಯಗಳು ಹದಿನೈದು, ಗದ್ಯಭಾಗಗಳು ಆರು ಇದ್ದು ಎರಡೂವರೆ ಪುಟಗಳನ್ನು ಹೊಂದಿದೆ. ಶ್ರೀಪತಿ ಶಾಸ್ತ್ರಿಗಳು ಬರೆದುದರಲ್ಲಿ ಹೆಚ್ಚು ಕಡಿಮೆ ಬೇರೆ ಬೇರೆ ರಾಗ ತಾಳಗಳ ಪದ್ಯಗಳು ನೂರು ಮತ್ತು ಗದ್ಯ ಭಾಗಗಳು ಐವತ್ತನಾಲ್ಕು ಇದ್ದು ಹದಿನಾರು ಪುಟಗಳಿಗೆ ವ್ಯಾಪಿಸಿದೆ.

ಇಷ್ಟ ದೇವತೆಯಾದ ಶ್ರೀ ಕೃಷ್ಣನನ್ನು ಮೊದಲಿಗೆ ಶಾರ್ದೂಲ ವಿಕ್ರೀಡಿತ ವೃತ್ತದಲ್ಲಿ ಪ್ರಾರ್ಥಿಸಿ, ಗಣಪತಿಯ ಸ್ತುತಿಯೊಂದಿಗೆ ಆರಂಭವಾದ ಈ ಖಂಡ ಚಂಪೂ ಕೃತಿಯಲ್ಲಿ ಸಂಸಾರದ ಕಷ್ಟವನ್ನು ಈ ರೀತಿಯಲ್ಲಿ ಕವಿ ವರ್ಣಿಸಿದ್ದಾರೆ.

"ಕಷ್ಟವೋ ಸಂಸಾರು ಸಕಲ ಪ್ರಾಣ್ಯಾಂಕ । ಕೃಷ್ಣದೇವಾ ಧ್ಯಾನ ಕರಪ ಬಹುರೋಕ"

ಈ ಸಂಸಾರವು ಸಕಲ ಪ್ರಾಣಿಗಳಿಗೂ ಕಷ್ಟವಾದುದು. ಶ್ರೀ ಕೃಷ್ಣನ ಧ್ಯಾನ ಮಾಡುವುದೇ ಬಹಳ ಒಳ್ಳೆಯದು. ಕನಸಿನಂತಿರುವ ಈ ಸಂಸಾರದಿಂದ ಸಿಗುವ ಸುಖ ಸಹಜ ಸುಖವಲ್ಲ. ಮಹಾತ್ಮರಾದವರು ಯಾವಾಗಲೂ ಸುಖದ ಕಡೆ ಮುಖ ಮಾಡದೆ ಪರಮಾತ್ಮನ ನಾಮಸ್ಮರಣೆ ಮಾಡುತ್ತಾ ಕಾಲಕಳೆಯುತ್ತಾರೆ ಸುಖಾಪೇಕ್ಷೆಯ ಹಿಂದೆ ದು:ಖವೂ ಇದೆ ಎನ್ನುವುದನ್ನು ಒಂದು ದೃಷ್ಟಾಂತದ ಮೂಲಕ ಇಲ್ಲಿ ಸಮರ್ಥಿಸಲಾಗಿದೆ.

"ಮಾಸಾ ಆಶೇನೆ ಮಚ್ಛಾಕ ಗಾಳ ದೋಳ್ಯಾಂಕ ದೀಸ ನಾ।"

ಮೀನಿಗೆ ಗಾಳಕ್ಕೆ ಸಿಕ್ಕಿಸಿದ ಮಾಂಸ ಮಾತ್ರ ಕಣ್ಣಿಗೆ ಕಾಣುತ್ತದೆ. ಗಾಳ ಕಾಣುವುದಿಲ್ಲ. ಅದೇ ರೀತಿ ಸುಖಾಪೇಕ್ಷೆಯಿಂದ ಪ್ರಾಣಿಗಳಿಗೆ ದು:ಖಕ್ಕೆ ಕಾರಣ ತೋರುವುದಿಲ್ಲ. "ಸರ್ಪದ ಹೆಡೆಯ ರತ್ನದಂತೆ" ಸುಖದ ತುದಿಗೆ ದು:ಖ ಇದೆ. "ಆಶೆಗೆ ನಾಶವಿಲ್ಲ, ನಾಶ ತನಗೆ". ಹಾಗಾಗಿ ಜ್ಞಾನಿಗಳು ಆಶೆಯನ್ನು ತ್ಯಜಿಸಿ ಎಲ್ಲವನ್ನೂ ಭಗವಂತನಿಗೆ ಅರ್ಪಿಸಿ ಸಂತೋಷದಿಂದ ಕಾಲ ಕಳೆಯುತ್ತಾರೆ.

ಹರಿಕಥೆಗನುಗುಣವಾಗಿ ಪೀಠಿಕೆ ಇಲ್ಲಿ ಸುಂದರವಾಗಿ ಬಂದಿದೆ. ಶುಕ ಮುನಿಗಳು ಪರಮಾತ್ಮನ ಭಕ್ತನಾದ ಪರೀಕ್ಷಿತರಾಜನಿಗೆ ಹೇಳಿದ ಭಾಗವತದ ನಡುವೆ ಭಕ್ತ ಪ್ರಹ್ಲಾದನ ಕಥೆಯು ಬಂದು ಕೇಳುವ

ಅಭಿಲಾಷೆ ರಾಜನಿಗೆ ಉಂಟಾಗುತ್ತದೆ. ಅದನ್ನು ಅರ್ಥ ಪೂರ್ಣವಾಗಿ ಶ್ರೀಪತಿ ಶಾಸ್ತ್ರಿಗಳು ಕನ್ನಡ ಭಾಷೆಯಲ್ಲಿ ಸುಲಲಿತವಾಗಿ ವರ್ಣಿಸಿದ್ದಾರೆ.

'ಪ್ರಹ್ಲಾದ ಚರಿತ್ರ' ಶ್ರೀ ಕೃಷ್ಣನ ವಿಜಯದ ಕಥೆ. ದುಷ್ಟರನ್ನು ಶಿಕ್ಷಿಸಿ ಶಿಷ್ಟರನ್ನು ರಕ್ಷಿಸುವುದೇ ಅವನ ಅವತಾರದ ಮುಖ್ಯ ಉದ್ದೇಶ. ದುಷ್ಟನಾದ ಹಿರಣ್ಯ ಕಶಿಪುವನ್ನು ಸಂಹರಿಸಿ ಭಕ್ತ ಪ್ರಹ್ಲಾದನನ್ನು ಉದ್ಧರಿಸಲು ಮಹಾವಿಷ್ಣುವು ನರಸಿಂಹಾವತಾರವನ್ನು ತಾಳುತ್ತಾನೆ. ಪ್ರಹ್ಲಾದನ ಭಕ್ತಿಗೆ ಒಲಿದು ಶಾಂತನಾದ ಮಹಾವಿಷ್ಣು ಪ್ರಹ್ಲಾದನನ್ನು ಹರಸಿ ಅಂತರ್ಧಾನನಾದ ಕಥೆ ಇಲ್ಲಿ ಇದೆ.

ವೈಕುಂಠದ ದ್ವಾರ ಪಾಲಕರಾದ ಜಯವಿಜಯರು ಸನಕ ಸನಾತನಾದಿ ಮುನಿಗಳ ಶಾಪದಿಂದ ಶ್ರೀ ಹರಿಯ ವೈರಿಯಾಗಿ ಜನಿಸಿದರು. ದುಷ್ಟರ ಜನನ ಲೋಕದ ಮೇಲೆ ದುಷ್ಪಾರಿಣಾಮವನ್ನುಂಟು ಮಾಡುತ್ತದೆ. ಭೂಮಿ ಕಂಪಿಸುತ್ತದೆ. ಹೊಗೆಯು ಭೂಮಂಡಲವನ್ನಿಡೀ ವ್ಯಾಪಿಸಿ ಆಕಾಶವು ರಕ್ತವರ್ಣವಾಗಿ ವಿಕಾರವಾಗಲು ಮೂರು ಲೋಕವು ಗಾಬರಿಗೊಳ್ಳುತ್ತದೆ.

ತಮೋಗುಣಪ್ರಧಾನವಾಗಿರುವ ಹಿರಣ್ಯಾಕ್ಷ, ಹಿರಣ್ಯ ಕಶಿಪು ಲೋಕಕಂಟಕರಾಗಿ ಬೆಳೆಯುತ್ತಿರಲು, ಹಿರಣ್ಯಾಕ್ಷನು ಭೂಮಿಯನ್ನು ಸುತ್ತಿಕೊಂಡು ಸಮುದ್ರದಲ್ಲಿ ಮುಳುಗಿದನು. ಮಹಾವಿಷ್ಣು ವರಾಹಾವತಾರ ತಾಳಿ ಆತನನ್ನು ಕೊಂದ ವಾರ್ತೆಯು ದೂತಿಯ ಮುಖಾಂತರ ತಾಯಿ ದಿತೀದೇವಿಗೆ ತಿಳಿಯುತ್ತದೆ. ವಜ್ರಾಯುಧದ ಏಟು ತಲೆಗೆ ಬಿದ್ದಂತಾಗಿ ವೇದನೆ ತಡೆಯಲಸಾಧ್ಯವಾಗಿ ಮರುಗುತ್ತಾಳೆ.

"ದೇವೆಂದ್ರಾಕ ಸಹಾವ್ಹೊ ದೌನು ತುವೆಂ ಯಾ ಚೆಡ್ವಾಕ ಮಾರುನ್ನಲಂ" ದೇವೇಂದ್ರನಿಗೆ ಸಹಾಯವಾಗಲೆಂದು ನೀನು ನನ್ನ ಮಗನನ್ನು ಕೊಂದದ್ದು ಸರಿಯೇ? ನನ್ನನ್ನು ಕೊಂದ ಮೇಲೆ ಮಗನನ್ನು ಸಂಹರಿಸಬಹುದಾಗಿತ್ತು ಈ ಹೊತ್ತಲ್ಲಿ ಯಾತನೆಯನ್ನು ನಾನು ಹೇಗೆ ಸಹಿಸಲಿ? "ತ್ಯಾ ಚೆಡ್ವಾಕ ಸಾಂಗಾತುನಾ" (ಆ ಮಗುವಿಗೆ ಜೊತೆಗೆ ಯಾರಿಲ್ಲ) ಎಂದು ದಿತಿದೇವಿ ಮಗನ ಅಗಲಿಕೆಯಿಂದ ದು:ಖಿತಪ್ತಳಾದುದನ್ನು ಕವಿ ಹೃದಯವಿದ್ರಾವಕವಾಗಿ ಚಿತ್ರಿಸಿದ್ದಾರೆ. ಓರ್ವ ಜನ್ಮದಾತೆಗೆ ತನ್ನ ಮಗನ ಅಗಲಿಕೆಯಿಂದುಂಟಾಗುವ ವೇದನೆ ಇಲ್ಲಿ ಕರುಣರಸವಾಗಿ ಹರಿದಿದೆ.

ಸಂಚಾರಕ್ಕೆ ಹೋಗಿದ್ದ ಹಿರಿಯಮಗ ಹಿರಣ್ಯ ಕಶಿಪು ತಾಯಿಯ ದುರವಸ್ಥೆಯನ್ನು ಕಂಡು ಆಶ್ಚರ್ಯಪಡುತ್ತಾನೆ. "ಉಜ್ವಾಕ ಭಾಜ್ಸಪ, ಕಸಂ ಕೊಣೆದಾಲ್ಲೆರೀಲೆ (ಯಾರಾದರೂ ಬೆಂಕಿಯನ್ನು ಸುಡುವುದು ಹೇಗೆ?) ನಿನ್ನ ಈ ಸ್ಥಿತಿಗೆ ಕಾರಣರು ಯಾರು? ಬೇಗನೆ ತಿಳಿಸು ಎಂದು ಅಂಗಲಾಚುತ್ತಾನೆ. ವಿಷಯ ತಿಳಿದು ರುದ್ರನಂತಾಗುತ್ತಾನೆ. ಅವನ ಪರಾಕ್ರಮ, ಶೌರ್ಯ, ಧೈರ್ಯವೆಲ್ಲ ಮುಂದಿನ ಪದ್ಯದಲ್ಲಿ ವೀರರಸ ಪ್ರಧಾನವಾಗಿ ಬಂದಿದೆ.

"ಬ್ರಹ್ಮಾ ಖಾಂಡ್ರಂ ಮಹೇಶ್ವರಾಕಣೆ ಮಹಾವಿಷ್ಣುಕ ತಾತ್ಸೈರಂ ಯಾ। ಕರ್ಮಾಸಾಕ್ಷಿ ತೆ ಸೂರ್ಯಚಂದ್ರ ತೆಣಿ ಯಾ ಲೋಕಾಂತುಂ ವಾಂಚಾಕ ನಾ । ಧರ್ಮಾದೇವತೆ ಖೈಂತೆ ವೆತ್ತೆಲೆ ಮಹಾಯೋಗ್ಯಾಂಕ ಪೂರೈರಂ ಯೇಂ॥ ಬ್ರಹ್ಮಾಂಡಚೆ ವರ್ಕೈನಾ ಬಾಜ್ಜಿರಂ ಪಳೇ ತುಜ್ಜ್ಯಾಣ ಯೇಂ ನಿಶ್ಚಯಂ॥

(ಬ್ರಹ್ಮನನ್ನು ಕತ್ತರಿಸುತ್ತೇನೆ. ಶಿವನನ್ನು ವಿಷ್ಣುವನ್ನು ಕೊಚ್ಚಿ ಹಾಕುತ್ತೇನೆ. ಈ ಕುಕೃತ್ಯಕ್ಕೆ ಸಾಕ್ಷೀಭೂತರಾಗಿರುವವರು ಸೂರ್ಯ ಚಂದ್ರರು. ಅವರು ಈ ಭೂಮಿಯಲ್ಲಿ ಬದುಕುವುದಕ್ಕಿಲ್ಲ. ಧರ್ಮದೇವತೆಗಳವರು ಎಲ್ಲಿಗೆ ಹೋದಾರು? ಮಹಾಯೋಗ್ಯರನ್ನು ಹೂಳಿ ಹಾಕುತ್ತೇನೆ. ಇಡೀ

ಬ್ರಾಹ್ಮಾಂಡವನ್ನು ಉಳಿಸುವುದಿಲ್ಲ. ನಿನ್ನಾಣೆಯಾಗಿಯೂ ಸುಟ್ಟು ಹಾಕುತ್ತೇನೆ. ಇದು ನಿಶ್ಚಯ) ಎನ್ನುತ್ತಾ ವೀರಾವೇಶದಿಂದ ಕಠಾರಿಯನ್ನು ಕೈಯಲ್ಲಿ ಹಿಡಿದು ಹೊರಡುತ್ತಾನೆ. ತಮೋಗುಣ ಪ್ರಧಾನರಲ್ಲಿ ತಾಳ್ಮೆ ಇರುವುದಿಲ್ಲ. ದುಡುಕಿದ ಮಗನನ್ನು ಕಂಡ ತಾಯಿ "ಅವಸರ ಬೇಡ, ಆ ಮಹಾವಿಷ್ಣು ಸಾಮಾನ್ಯನಲ್ಲ. ಅವನಲ್ಲಿ ಯುದ್ದ ಮಾಡಬೇಕಾದರೆ ಬ್ರಹ್ಮದೇವನಿಂದ ವರವನ್ನು ಪಡೆದು ಹೊರಡುವುದು ಲೇಸು" ಎಂದು ಸಲಹೆ ಕೊಡುತ್ತಾಳೆ.

ತಾಯಿಯ ಮಾತಿನಂತೆ ಒಂಟಿ ಕಾಲಲ್ಲಿ ಬಹಳಷ್ಟು ಹೊತ್ತು ನಿಂತು ಸಮದೃಷ್ಟಿಯಿಂದ ಸೂರ್ಯನನ್ನು ನೋಡುತ್ತಾ ತಪಸ್ಸು ಮಾಡುತ್ತಾನೆ. ತಪಸ್ಸಿನ ಜ್ವಾಲೆ ಇಂದ್ರಲೋಕವನ್ನು ಬಾಧಿಸಿತು. ದೇವೇಂದ್ರಾದಿಗಳು ಬ್ರಹ್ಮನನ್ನು ಸ್ತುತಿಸಲು ಬ್ರಹ್ಮ ಪ್ರತ್ಯಕ್ಷನಾದನು. "ಚಾಕರಿ ಕಷ್ಟ ಲೋಕಾಂತುಂ" (ಲೋಕದಲ್ಲಿ ಚಾಕರಿ ಕೆಲಸ ಕಷ್ಟ) ನಾವು ಈ ಕೆಲಸ ಬಿಟ್ಟು "ಖ್ಯೆಂಲೆ ನಾಥೌಂವೇರಿಂಗ" (ಎಲ್ಲಾದರೂ ಓಡಿ ಹೋಗುತ್ತೇವೆ) ಎಂದಾಗ ಬ್ರಹ್ಮನು ಆ ದೈತ್ಯನ ಇಷ್ಟಾರ್ಥ ಈಡೇರಿಸಿ ನಿಮಗೆ ಕ್ಷೇಮವನ್ನುಂಟು ಮಾಡುತ್ತೆನೆ ಎಂದು ಅಭಯಕೊಡುತ್ತಾನೆ.

ಬ್ರಹ್ಮಾಂಡವನ್ನು ಸುಡಲು ಹೊರಟವನಿಗೆ ಬ್ರಹ್ಮನ ವರವೂ ಸಿಕ್ಕಿದರೆ "ಸರಪಾಕ ಫಾಕ ಐಲ್ಲಿ ಗಾದದಲ್ಲಿ" ಸರ್ಪಕ್ಕೆ ರೆಕ್ಕೆ ಬರುವಂತಾಗುತ್ತದೆ. ಎಂದು ಗೋಳಾಡುತ್ತಾರೆ. ಕವಿ ಕೊಟ್ಟ ಹೋಲಿಕೆಯಲ್ಲಿ ಪರಿಸ್ಥಿತಿಯ ಕಾರ್ಯ ಗೌರವವಿದೆ. ಮೊದಲೇ ಸರ್ಪ ವಿಷಜಂತು. ಅದಕ್ಕೆ ರೆಕ್ಕೆ ಬಂದರೆ ಅದರ ಹಾರಾಟವನ್ನು ತಡೆಯುವವರಾರು?

"ಭಗವಂತ ಭಕ್ತಾದೀನ. ಭಕ್ತಿಯಿಂದ ಸ್ತುತಿಸಿದರೆ ಯುಕ್ತಿಯಿಂದ ವಿರೋಧಿಯನ್ನು ಸಂಹರಿಸುತ್ತಾನೆ". ದೇವತೆಗಳಿಗೆ ಬಹ್ಮನ ಮಾತು ಹಿಡಿಸಿತು. ಉಗ್ರ ತಪಸ್ಸು ಮಾಡುವ ಹಿರಣ್ಯ ಕಶಿಪು "ಉಜ್ಜೊ ಲಾಗಲ್ಲೋ ಹೊಳ್ಳೊ ರೂಖಿಸೊ" ಬೆಂಕಿ ಹಿಡಿದ ದೊಡ್ಡ ಮರದಂತೆ ಹೊಳೆಯುತ್ತಿದ್ದಾನೆ. ಈ ಹೋಲಿಕೆ ಸೂಕ್ತವಾಗಿದೆ. ಮರಕ್ಕೆ ಬೆಂಕಿ ಹಿಡಿದರೆ ಅದರ ಅಸ್ತಿತ್ವವೇ ಇಲ್ಲವಾಗುತ್ತದೆ. ಮುಂದೊಂದು ದಿನ ಹಿರಣ್ಯ ಕಶಿಪುವಿನ ಅಸ್ತಿತ್ವವೂ ಇಲ್ಲವಾಗುತ್ತದೆ.

ಬ್ರಹ್ಮ ಪ್ರತ್ಯಕ್ಷನಾಗಿ ಹಿರಣ್ಯಕಶಿಪುವಿಗೆ ವರ ಕೊಡುತ್ತಾನೆ.

"ದೇವಾಸುರಾಂಟುಂ ಮೃಗಪಕ್ಷಿ ಮಹೋರಗಾಂಟುಂ। ಗಂಧರ್ವ ಕಿಂಪುರುಷ ಕಿನ್ನರ ಗುಹ್ಯಕಾಂಟುಂ ।
ವಿದ್ಯಾಧರಾಂಟುಂ ವಿಷಜಂತುಕುಲಾಂಟುಂ ಮರ್ತ್ಯ। ಜಾತೀಂಟುಂ ನಾಮರಣ ತುಕ್ಕಾಣು ಸಾಂಗ ಮುಕ್ಕಾ॥
ಒಲ್ಲೇನ ಸುಕ್ಕೇನ ಮಹಾಯುಧೇನ ಮಂತ್ರಾಸ್ತ್ರ ಮಂತ್ರೌಷಧ ಮೂಲಕೇನ। ದೀಸಾನ್ನು ರಾತ್ತೀನ್ನು ಘೊರೋನ್ನು ಬ್ಯಾರ ಕರುನ್ನ ಯಾ ನಜ್ಜಸಂ ಮೃತ್ಯು ಮುಕ್ಕಾ॥

ಹಿರಣ್ಯ ಕಶಿಪುವಿನ ಕೋರಿಕೆಯಂತೆ ಬ್ರಹ್ಮ ವರ ನೀಡಿ ಮಾಯವಾಗುತ್ತಾನೆ.

ಕೇವಲ ಕರ್ನಾಡ ಭಾಷೆಯ ಪ್ರತ್ಯಯಗಳನ್ನು ಮಾತ್ರ ಅಂಟಿಸಿ ಸಂಸ್ಕೃತ ಮಯವಾದ ಈ ಸರಳವಾದ ವೃತ್ತವನ್ನು ನೋಡಿದರೆ ಇವರ ಕವಿತಾ ಶಕ್ತಿಯ ಅರಿವಾಗುತ್ತದೆ. ಈ ಪದ್ಯಕ್ಕೆ ಭಾಷಾಂತರವೇ ಬೇಡ.

ಚಕ್ರವರ್ತಿಯಾಗಿದ್ದ ಹಿರಣ್ಯಕಶಿಪುವಿಗೆ ತನ್ನಲ್ಲೇ ಒಂದು ಯೋಚನೆ ಬರುತ್ತದೆ. "ವ್ಯರ್ಥದಾಲ್ಲಂ ಮತ್ಥಂ ಕೆಲಸ। ದಿಲ್ಲಿಲಿ ಭಾಸ" (ವ್ಯರ್ಥವಾಯ್ತು ನನ್ನ ಕೆಲಸ ।) ತಾಯಿಗೆ ಕೊಟ್ಟ ಮಾತು ನೆನಪಿಗೆ ಬಂದು

ಮಹಾವಿಷ್ಣುವನ್ನು ಹದಿನಾಲ್ಕು ಲೋಕಗಳಲ್ಲೂ ಹುಡುಕಿ ಕಾಣದೆ ಹಿಂತಿರುಗುವಾಗ ದಿವ್ಯಾಶ್ರಮವೊಂದು ಕಣ್ಣಿಗೆ ಬೀಳುತ್ತದೆ. ಆಶ್ರಮವನ್ನು ಪ್ರವೇಶಿಸಿ ವಿಚಾರ ತಿಳಿಸಿದಾಗ ಆ ಮುನಿಯು "ವೈರಿಯನ್ನು ತೋರಿಸುವುದು ಅಸಾಧ್ಯದ ಕೆಲಸವಲ್ಲ ನೋಡಿ ಮಾಡುವುದೇನು ಎನ್ನುವ ವಿಚಾರದಲ್ಲಿ ದೃಢತೆ ಬೇಕು. ಅವನು ತಪ್ಪಿಸಿಕೊಂಡು ಹೋದಾನು; ಬಿಡಬೇಡ" ಎನ್ನುತ್ತಲೇ ಕಣ್ಮರೆಯಾದ.

ಹಿರಣ್ಯಕಶಿಪು ಸುತ್ತಲೂ ದೃಷ್ಟಿ ಹಾಯಿಸಿದರೆ ಅಲ್ಲೇನೂ ಕಾಣದಾಯಿತು. ತಾನು ಮೋಸಹೋದ ವಿಚಾರ ಅರಿವಿಗೆ ಬಂದು "ಫುಳ್ಳೆನ ಪಳ್ಯೋಜಡ್ರ". (ಅವನನ್ನು ಮುಂದೆ ನೋಡುತ್ತೇನೆ) ಇವತ್ತು ಕೈತಪ್ಪಿದರೇನಂತೆ ಮುಂದೆ ನೋಡ್ಕೊಳ್ಳುತ್ತೇನೆ. ಎಂದು ಕೈಹಿಸುಕಿಕೊಂಡನು.

ಬ್ರಹ್ಮನ ಸಲಹೆಯಂತೆ ಇತ್ತ ದೇವತೆಗಳು ವಿಷ್ಣುವಿನ ಮೊರೆಹೋಗಿ, ಸಂಕಟವನ್ನು ತೋಡಿಕೊಂಡಾಗ ಅಮೃತ ವೃಷ್ಟಿಯ ಸಿಂಚನದಂತೆ ಆಶರೀರವಾಣಿಯೊಂದು ಕೇಳಿಸಿತು. ನೆಮ್ಮದಿಯ ನಿಟ್ಟುಸಿರು ಹೊರಹೊಮ್ಮಿತು.

ಪ್ರಹ್ಲಾದನ ಜನನಾನಂತರ ಹಿರಣ್ಯ ಕಶಿಪುವಿನ ಚಿಂತೆ ಹೆಚ್ಚಾಯಿತು. ಮಗುವಿನ ಮುಖದ ವರ್ಚಸ್ಸನ್ನು ನೋಡಿದಾಗಲೇ ಇಂಥವರು ಕಾಣಸಿಗುವುದು ಅಪರೂಪ ಎನ್ನುವ ಭಾವನೆ ಹುಟ್ಟಿತು. ಬೀದಿಯ ಹೆಣ್ಣು ಮಕ್ಕಳಂತೂ ಮಗುವಿನ ಚರ್ಯೆಯನ್ನು ಕಂಡು ಮಂತ್ರವಾದವನ್ನು ಮಾಡುವುದು ಒಳ್ಳೆಯದೆಂದು ಸಲಹೆಯಿತ್ತರು ಗುಣದ ಬಗ್ಗೆ ಸಂದೇಹ ಹುಟ್ಟಿತು.

ಸಂಸಾರದಲ್ಲಿ ಇದೆಲ್ಲ ಸಹಜವಾದುದು. ಮನುಷ್ಯನು ಹುಟ್ಟುವಾಗಲೇ ಅವನ ಪೂರ್ವಾಪರ ನಿಶ್ಚಯವಾಗುತ್ತದೆ. ಬಂದುದನ್ನೆಲಾ ಎದುರಿಸಲೇ ಬೇಕು ಎಂದು ತಾಯಿ ಅಭಿಪ್ರಾಯ ಪಡುತ್ತಾಳೆ.

ಹಿರಣ್ಯಕಶಿಪುವಿಗೆ ಮಗನ ನಡತೆಯನ್ನು ತಿದ್ದಬೇಕೆಂಬ ಯೋಚನೆ. ಮಗನಿಗೆ ಬುದ್ಧಿವಾದವನ್ನು ಹೇಳುತ್ತಾನೆ. ಆಗ ಪ್ರಹ್ಲಾದ "ಹೆಂಡತಿ ಮಕ್ಕಳ ಪ್ರೀತಿ ಕಾರಾಗೃಹ ಸ್ನೇಹದಂತೆ, ಎತ್ತುಗಳಿಗೆ ನೊಗವಿಟ್ಟು ಉಳುವುದೆಂದರೆ ಕುತ್ತಿಗೆಗೆ ಕುಣಿಕೆ ಬಿದ್ದಂತೆ" ಮನಸ್ಸು ಶುದ್ಧಿಯಾದರೆ ಸರ್ವವೂ ಶುದ್ಧಿಯಾಗುತ್ತದೆ ಎಂದು ಮಾರ್ಮಿಕವಾಗಿ ನುಡಿಯುತ್ತಾನೆ.

ತಂದೆಗೆ ಮಗನ ಮಾತುಗಳು ಮನದಲ್ಲಿ ಆಶ್ಚರ್ಯವನ್ನು ಹುಟ್ಟಿಸಿದರೂ "ಲೋಕಜ್ಞಾನಕ್ಕೆ ಅಕ್ಷರಜ್ಞಾನ ಅಗತ್ಯ. ಕುಲದೇವರ ಹೆಸರನ್ನು ಅಭ್ಯಾಸ ಮಾಡಿ ಪಾರಾಯಣ ಮಾಡು" ಎಂದು ಸಲಹೆ ಕೊಡುತ್ತಾನೆ. ಮಣ್ಣಿನ ಧೂಳಿನಲ್ಲಿ "ಓಂ ನಮ: ಶಿವಾಯ" ಎಂದು ಕುಲದೇವರ ಪಂಚಾಕ್ಷರೀ ಮಂತ್ರವನ್ನು ಬರೆದಾಗ "ಓಂ ನಮೋ ನಾರಾಯಣಾಯ" ಎಂದು ಪ್ರಹ್ಲಾದ ಓದುವನು. ಹರಿಸ್ಮರಣೆಯಲ್ಲದೆ ಬೇರೇನನ್ನು ಆತ ಹೇಳುವುದಿಲ್ಲ.

ಪ್ರಹ್ಲಾದನ ಧರ್ಮಜ್ಞಾನವನ್ನು ತತ್ವಾದರ್ಶಗಳನ್ನು ಕೇಳಿಯೂ ದುಷ್ಟನಾದ ತಂದೆ ಹಿರಣ್ಯ ಕಶಿಪುವಿನ ಕಣ್ಣು ತೆರೆಯಲಿಲ್ಲ. ತಾನು ಹೇಳಿದಂತೆ ಮಗ ಕೇಳಬೇಕೆಂದು ಹಠದಿಂದ ಗುರುಕುಲಕ್ಕೆ ಸೇರಿಸುತ್ತಾನೆ. ಗುರುಕುಲದಲ್ಲಿ ಈತನ ಚರ್ಯೆ ಉಳಿದ ಮಕ್ಕಳಂತಲ್ಲ ಎಂಬುದನ್ನು ಕವಿ ಮನಮುಟ್ಟುವಂತೆ ವಿವರಿಸಿದ್ದಾರೆ. ಪ್ರಹ್ಲಾದನಲ್ಲಿರುವ ಅದ್ಭುತ ಚಿಂತಾನಾಶಕ್ತಿಯನ್ನು ಸುಲಲಿತವಾಗಿ ಕವಿ ವರ್ಣಿಸಿದ್ದಾರೆ. ವೇದೋಪನಿಷತ್ತುಗಳ ತತ್ವಸಾರವನ್ನು ಪ್ರಹ್ಲಾದನ ಬಾಯಿಯಿಂದ ಹೇಳಿಸಿದ್ದಾರೆ. ಚಿಕ್ಕಂದಿನಲ್ಲೇ ಪ್ರಹ್ಲಾದನಲ್ಲಿ ದೈವೀಗುಣಗಳಿರುವುದನ್ನು ಮನತುಂಬಿ ಬಣ್ಣಿಸಿದ್ದಾರೆ.

ಪ್ರಹ್ಲಾದನು ಭವಸಾಗರದಿಂದ ಮುಕ್ತನಾಗುವಂತೆ ಭಗವಂತನನ್ನು ಸ್ಮರಿಸುವ ಸಾಲುಗಳಿವು:

"ದೇವ ಮುಕ್ಕ ತೂಂ ಗತಿ। ಹಾವ ಅತ್ತಂ ಅನಾಥಿ । ಭಾವ ಭಕ್ತೀನೆ ತುಜ್ಜಿ ಸೇವ ಕರ್ರಂ।

ಮನುಷ್ಯನು ಜನನಕ್ಕೆ ಬಂದಾಗ ಶರೀರ ಶಾಶ್ವತ ಎಂದು ಬಗೆದು, ಬೇಕು ಬೇಕಾದುದನ್ನು ಸಂಗ್ರಹಿಸಿ ಸಾಂಸಾರಿಕ ಸುಖವನ್ನು ಅನುಭವಿಸುತ್ತಾನೆ. ಕೊನೆಗೆ ನಶ್ವರವಾದ ಈ ಶರೀರ ಬಿದ್ದು ಹೋಗುತ್ತದೆ ಎಂದು ಗೊತ್ತಿದ್ದರೊ ಯಾರೂ ಇದರ ಬಗ್ಗೆ ಚಿಂತಿಸುವುದಿಲ್ಲ. ದೇವರನ್ನು ಮರೆತ ಕಾರಣದಿಂದಲೇ ಈ ಗತಿ ಬರುವಂತಾಯಿತು ಎಂಬ ತ್ತತ್ವದ ಮಾತುಗಳನ್ನು ಪ್ರಹ್ಲಾದನ ಬಾಯಿಯಿಂದ ಕವಿ ಆಡಿಸಿದ್ದಾರೆ.

ಪ್ರಹ್ಲಾದನ ಪ್ರಭಾವದಿಂದ ಗುರುಕುಲದಲ್ಲಿ ಸಹಪಾಠಿಗಳು ಹರಿಸ್ಮರಣೆ ಮಾಡುತ್ತಾರೆ. ಹಿರಣ್ಯಕಶಿಪುವಿಗೆ ದೂರು ಹೋಗುತ್ತದೆ. ಅಷ್ಟದಿಕ್ಪಾಲಕರೂ ತನ್ನ ಅಂಕೆಯಲ್ಲಿರುವಾಗ ಮಗನಾಗಿ ನೀನು ನನ್ನ ವೈರಿಯನ್ನು ಧ್ಯಾನಿಸುವುದು ಸರಿಯಲ್ಲ ಎಂದು ಉದ್ಧಟನದಿಂದ ವರ್ತಿಸುತ್ತಾನೆ. "ಹರಿಧ್ಯಾನದಿಂದ ಎಲ್ಲರಿಗೂ ಕ್ಷೇಮ ಉಂಟಾಗುತ್ತದೆ' ಎನ್ನುವ ಪ್ರಹ್ಲಾದನ ಮಾತು ಕೇಳಿ ಹಿರಣ್ಯಕಶಿಪುವಿಗೆ ಕಿವಿಗೆ ಅಂಕುಶಹಾಕಿದಂತಾಗುತ್ತದೆ.

ಪ್ರಹ್ಲಾದನಿಗೆ ವಿಚಿತ್ರವಾದ ಚಿತ್ರಹಿಂಸೆಗಳನ್ನು ನೀಡಿದರೂ ಆತನ ಪ್ರಾಣ ಹೋಗುವುದಿಲ್ಲ. ಸಮುದ್ರಕ್ಕೆ ತಂದು ಹಾಕಿದರೂ ಬದುಕಿ ಬರುತ್ತಾನೆ. ಇವನು ಸಾಮಾನ್ಯರಂತಲ್ಲ ಎನ್ನುವ ಅಂಶವು ಹಿರಣ್ಯಕಶಿಪುವಿನ ಅಂತರ್‌ದೃಷ್ಟಿಗೆ ಅಗೋಚರವಾಗುತ್ತದೆ. ಭಕ್ತಿಯ ಮುಂದೆ ಕ್ರೌರ್ಯ ನಿಷ್ಪ್ರಯೋಜಕ ಎಂಬುದು ಗಮನಿಸಬೇಕಾದ ಅಂಶ.

ಮಾನಸಿಕವಾಗಿ ಭ್ರಮನಿರಸನಗೊಂಡ ಹಿರಣ್ಯ ಕಶಿಪು ಪ್ರಹ್ಲಾದನನ್ನು ಕೊಲ್ಲಲು ಹಾಲಿನಲ್ಲಿ ವಿಷ ಬೆರೆಸಿ ಕೊಡುವಂತೆ ಪತ್ನಿಗೆ ಆಜ್ಞಾಪಿಸುತ್ತಾನೆ. ಕಯಾದುವಿಗೆ ಉಭಯಸಂಕಟ. ಮಗನ ಮೇಲಿನ ಮೋಹ ಒಂದು ಕಡೆ; ಗಂಡನ ಮೇಲಿನ ಭಯ ಇನ್ನೊಂದು ಕಡೆ ಆಕೆ ವ್ಯಸನದಿಂದ.

"ಓ ಮೇಳುಸ ಜನ್ಮು ಇಚ್ಚಾ ದಿಲ್ಲೊ ಮುಕ್ಕಾ । ಹಾಂ ಮಹಾ ಪಾತಕಿ ದಾಲ್ಲೆಂ ಖನ್ನೈ ನಾಕ್ಕಾ ॥

(ಈ ಹೆಣ್ಣು ಜನ್ಮ ಯಾಕೆ ಕೊಟ್ಟೆ ನನಗೆ. ನಾನು ಮಹಾಪಾಪಿಯಾದೆ ಯಾವುದೂ ಬೇಡ ನನಗೆ)

ಇಲ್ಲಿ ಹೆಣ್ತನದ ಕಷ್ಟ ಕಾರ್ಪಣ್ಯಗಳು ಮಾರ್ಮಿಕವಾಗಿ ಅಭಿವ್ಯಕ್ತವಾಗಿದೆ. ಗಂಡ ಹೇಳಿದಂತೆ ಕೇಳಬೇಕಾದವಳು ಹೆಂಡತಿ ತಪ್ಪಿದರೆ ಶಿಕ್ಷೆ. ಹಾಲುಣಿಸಿದ ಕೈಯಿಂದ ವಿಷ ಉಣಿಸುವ ಪರಿಸ್ಥಿತಿ ಕಯಾದುವಿನ ಪಾಲಿಗೆ ಬಂದು ದು:ಖತಪ್ತಳಾಗುತ್ತಾಳೆ. ದೇವರ ಮೇಲೆ ಭಾರ ಹಾಕುತ್ತಾಳೆ. ತಾಯಿಯ ದು:ಖವನ್ನು ಕಂಡು ಪ್ರಹ್ಲಾದ ಧೈರ್ಯ ತುಂಬುತ್ತಾನೆ. ಆತನ ಪಾಲಿಗೆ ವಿಷ ಅಮೃತವಾಗುತ್ತದೆ.

ಈವರೆಗಿನ ಕತೆಯನ್ನು ಬರೆದ ಪಡ್ರೆ ಶ್ರೀಪತಿ ಶಾಸ್ತ್ರಿಗಳು ಅಸೌಖ್ಯದಿಂದ ತೀರಿಕೊಂಡರು. ನಂತರದ ಭಾಗವನ್ನು ಅವರ ಸಂಬಂಧಿಕರಲ್ಲೊಬ್ಬರಾದ ಬೊಳಂಜಡ್ಕ ಗಣಪತಿ ಭಟ್ಟರು ಕರ್ಹಾಡ ಭಾಷೆಯಲ್ಲೇ ಸ್ವ ಪ್ರತಿಭೆಯಿಂದ ಪೂರ್ಣಗೊಳಿಸಿದ್ದಾರೆ. ಗಣಪತಿ ಭಟ್ಟರು ಬರೆದ ಭಾಗವು ಶಾಸ್ತ್ರಿಗಳ ಬರವಣಿಗೆಯಂತೆಯೇ ಇದ್ದು ಭಾವಾಭಿವ್ಯಕ್ತಿಯಲ್ಲಿ ಭಾಷಾಶುದ್ಧಿಯಾಲ್ಲಿ. ಸರಳತೆಯಲ್ಲಿ ಅಚ್ಚುಕಟ್ಟಾಗಿದೆ.

ತಂದೆ ಹಿರಣ್ಯಕಶಿಪುವಿನ ಮಾನಸಿಕ ತಳಮಳವನ್ನು ಅರಿತ ಪ್ರಹ್ಲಾದ ದೈನ್ಯದಿಂದ ತಂದೆಯಲ್ಲಿ ಹೇಳುತ್ತಾನೆ.

"ನಶ್ವರ ದೇಹಯೇಂ ಹಾಜ್ಜೆರಿ ತುಕ್ಕಾ । ವಿಶ್ವಾಸು ಖೆದ್ದಳಿಂ ಅತ್ಸಪ ನಾಕ್ಕಾ।

ವಿಶ್ವನಾಥು ಶ್ರೀಹರಿಧ್ಯಾನ ರೊಕ್ಕಾ। ಈಶ್ವರು ತೋಚಿ ಯಿಂ ವಿಸರಪ ನಕ್ಕಾ।

(ಈ ದೇಹ ನಶ್ವರ ದೇಹವನ್ನು ನಂಬಬೇಡ. ಶಿವನೇ ಶ್ರೀ ಹರಿ ಇದನ್ನು ಮರೆಯಬೇಡ. ಹರಿಧ್ಯಾನದಿಂದ ಸಕಲ ಆಭೀಷ್ಟಗಳೂ ಈಡೇರುತ್ತವೆ.)

ಹರಿಹರರಲ್ಲಿ ಭೇದವೇಕೆ? ಶೈವ ವೈಷ್ಣವ ಎಲ್ಲವೂ ಒಂದೇ. ಮನುಷ್ಯ ಜನ್ಮವೇ ದೊಡ್ಡದು. ಜೀವಾತ್ಮನೇ ಶಿವ ನಾರಾಯಣರು. ಆದರೆ ನೀನು ಶ್ರೀ ಹರಿ ವೈರಿ ಎನ್ನುತ್ತಿಯಲ್ಲವೇ ? ಅವನು ಎಲ್ಲರ ಹೃದಯದಲ್ಲಿದ್ದಾನೆ. ನೀನು ಬುದ್ಧಿ ಭ್ರಮಣೆಗೆ ಒಳಗಾಗಿರುವಿ ಎನ್ನುವನು. ಪ್ರಹ್ಲಾದನಲ್ಲಿ ಅದ್ಭುತವಾದ ದೈವೀ ಭಾವನೆಗಳು ಅಡಗಿರುವುದನ್ನು ಕವಿ ಇಲ್ಲಿ ಸಾರಿದ್ದಾನೆ. ಆಧ್ಯಾತ್ಮ ಚಿಂತನೆಯಂತೆ ಜೀವನ ಸಾರ್ಥಕವಾಗುವುದು ಭಗವಂತನ ಧ್ಯಾನದಿಂದ ಎನ್ನುವ ಪ್ರತಿಪಾದನೆ ಇಲ್ಲಿದೆ. ದೇವರನ್ನು ಧ್ಯಾನಿಸುವುದು ಬಿಟ್ಟರೆ ಪ್ರಹ್ಲಾದನಲ್ಲಿ ಬೇರೆನಿಲ್ಲ. ಪಾರಮಾರ್ಥಿಕ ಚಿಂತನೆಯ ಪ್ರೇರಣಾ ಶಕ್ತಿ ಧ್ಯಾನದಲ್ಲಿ ಅಡಗಿದೆ ಎಂದು ಕವಿ ಇಲ್ಲಿ ಸಾರಿದ್ದಾರೆ.

ಪ್ರಹ್ಲಾದನ ತತ್ತ್ವೋಪದೇಶದಿಂದ ದಿಕ್ಕು ತೋಚದ ಹಿರಣ್ಯಕಶಿಪು ಕರ್ಣಕರ್ಕಶವಾಗುವಂತೆ 'ಎಲ್ಲಿದ್ದಾನೆ ಶ್ರೀಹರಿ? ನನಗೊಮ್ಮೆ ಅವನನ್ನು ತೋರಿಸು. ಅವನ ಸುರುಪ ನಾನೂ ಒಮ್ಮೆ ನೋಡುತ್ತೇನೆ' ಎನ್ನುತ್ತಾನೆ. ಆಗ ಪ್ರಹ್ಲಾದ ಅವ ಸರ್ವಾಂತರ್ಯಾಮಿ. ಅವನಿಲ್ಲದ ಜಾಗವಿಲ್ಲ. ಎಲ್ಲಿ ಬೇಕಾದರೂ ಅವನನ್ನು ಕಾಣಬಹುದು. ಎಂದಾಗ ಹಿರಣ್ಯಕಶಿಪು ಕೋಪದಿಂದ "ಇದ್ದಾನೆ, ಇದ್ದಾನೆ" ಎಂದು ಹೇಳುತ್ತಿ. ನನ್ನ ದೃಷ್ಟಿಗೆ ಆ ದುಷ್ಟ ಮಹಾಪಾಪಿ ಕಾಣಲು ಸಿಗುವುದಿಲ್ಲ. ತೋರಿಸು ಅವನನ್ನು . ನಿನ್ನ ಚಿಕ್ಕಪ್ಪನನ್ನು ಕೊಂದವನು ನನಗೊಮ್ಮೆ ಸಿಗಲಿ. ಅವನನ್ನು "ಫಾಪ್ಪರೋನು ವಿತ್ಸಳ್ಯೆರಂ (ಮೆಟ್ಟಿ ತುಳಿಯುತ್ತೇನೆ) ಎನ್ನುತ್ತಾನೆ. ಅದನ್ನು ಕೇಳಿದ ಪ್ರಹ್ಲಾದನು "ಚಿಕ್ಕಪ್ಪ ತಪ್ಪು ಮಾಡಿದ್ದು ಸಹಜ."

"ಚಪ್ಪುಂಜಣ್ಣು ಭೂಯಿಂ ಖಾಕ್ಕೆಂ । ಉಪ್ಪಿಲೊ ಸಮುದ್ರಾಕ ತೋ" ||

(ಭೂಮಿಯನ್ನು ಕಂಕುಳಲ್ಲಿ ತುರುಕಿಸಿ ಸಮುದ್ರಕ್ಕೆ ಅವನು ಹಾರಿದನು)

"ತಪ್ಪು ಯಾರದ್ದು? ತಪ್ಪು ಒಪ್ಪು ತೀರ್ಮಾನಕ್ಕೆ ಬೆಪ್ಪನಾದ ನೀನು ಹೊರಟಿರುವೆಯೋ" ಎನ್ನುತ್ತಾನೆ.

ಹಿರಣ್ಯಕಶಿಪುವಿನ ಸ್ಥಿತಿ ವಿಪರೀತವಾಗ್ತಿ ಪ್ರಳಯ ಕಾಲದ ಕಾಲಭೈರವನಂತೆ ಅಲ್ಲಲ್ಲಿ ನೆಲಕ್ಕೆ, ಗೋಡೆಗಳಿಗೆ, ಕಂಭಗಳಿಗೆಲ್ಲ ಒದೆಯುತ್ತಾ ' ನಿನ್ನ ಹರಿ ಎಲ್ಲಿದ್ದಾನೆ? ಇಲ್ಲಿದ್ದಾನೋ ಎಂದು ಒಂದು ಬಾಗಿಲಿಗೆ ಒದೆಯುವಾಗ ಇಡೀ ಬ್ರಹ್ಮಾಂಡವೇ ಕಂಪಿಸುವಂತೆ ಭಯಂಕರವಾದ ಶಬ್ದ ಉಂಟಾಗಿ ಬಾಗಿಲು ಒಡೆದು ಹೊಸ್ತಿಲಲ್ಲಿ ಜ್ಯೋತಿರ್ಮಯವಾದ ವಿಕಾರ ಸ್ವರೂಪವೊಂದು ಪ್ರತ್ಯಕ್ಷವಾಯಿತು.

"ಉಜ್ಜಾ ಜ್ವಾಲೆಶಿ ಜೀಬ ದೀಸರ ಮಹಾ ಸಿಂಹಾಕೃತೀ ತೋಂಡ ತೇಂ। ವಜ್ರಾ ದಾಡೊಣೆ ದಾಂತ ಕೇಸರ ಪಳ್ಯಾವೆತ್ತಂ ಮಹಾ ಭೀಕರ ।

ತಾಜ್ಜೇ ಹಾತಣೆ ಪಾಯೆ ದೆಖ್ಖುತಂ ಗದಾದಂಡಾಚ ಕಣ್ಯೇಚಿ ಓ। ಭಾಜ್ಜುಂ ವೇರಣು ಸೋಡ) ಲೋಕು ಭಯದೌಂ ಕಡ್ಕಳ್ಳಿಂ ಥೈಂಭಿಲ್ಲಿಲಿಂ ॥"

(ಬೆಂಕಿಯ ಜ್ವಾಲೆಯಂತೆ ನಾಲಗೆ, ಸಿಂಹಾಕೃತಿಯ ಮುಖ, ವಜ್ರದ ದಾಡೆಯಂತಹ ಹಲ್ಲು. ಭೀಕರವಾದ ಕೇಸರಗಳು, ಗದಾದಂಡದಂತಿರುವ ಕೈಕಾಲುಗಳು ಲೋಕವೇ ಉರಿದು ಹೋಗುತ್ತದೆಯೋ ಎನ್ನುವ ರೀತಿಯಲ್ಲಿ ಭಯಗೊಂಡು ಅಲ್ಲಿದ್ದವರೆಲ್ಲ ನಡುಗಿದರು).

ಭಯಂಕರವಾದ ನರಸಿಂಹಾಕೃತಿಯ ಈ ರೂಪವು ಹಿರಣ್ಯಕಶಿಪುವಿನ ಅಂತ್ಯಕಾಲವನ್ನೇ ಸೂಚಿಸುತ್ತಿದ್ದ

ಬ್ರಹ್ಮನು ಕೊಟ್ಟ ವರಕ್ಕೆ ದೋಷ ಬರದಂತೆ ತ್ರಿಸಂಧ್ಯಾಸಮಯದಲ್ಲಿ ಹೊಸ್ತಿಲಲ್ಲಿ ಕುಳಿತು ಹಿರಣ್ಯಕಶಿಪುವನ್ನು ಮಡಿಲಲ್ಲಿ ಕೂರಿಸಿ ಅಸ್ತ್ರವಿಲ್ಲದೆ ಚೂಪಾದ ಉಗುರುಗಲಿಂದ ಹೊಟ್ಟೆ ಬಗಿದು ಕರುಳು ಎಳೆದು ಕೊರಳಿಗೆ ಮಾಲೆಯಾಗಿ ಧರಿಸಿದನು. ಈ ಭಯಾನಕ ದೃಶ್ಯವನ್ನು ಕಂಡ ಪ್ರಹ್ಲಾದನು ಭಯಭೀತನಾಗಿ ನರಸಿಂಹಾವತಾರದ ಮುಂದೆ ಬಹುವಿಧದಲ್ಲಿ ಪ್ರಾರ್ಥಿಸಿದನು. ಈತನ ಸ್ತುತಿಗೆ ಮೆಚ್ಚಿ ಶಾಂತ ಸ್ವರೂಪಿಯಾದ ಮಹಾವಿಷ್ಣುವು ಪ್ರಹ್ಲಾದನನ್ನು ಸಂತೈಸಿ ಅಂತರ್ಧಾನನಾದನು. ದೇವತೆಗಳು ಹೂ ಮಳೆ ಸುರಿಸಿದರು.

ಪ್ರಹ್ಲಾದನು ತಾಯಿಯ ಬಳಿಗೆ ಹೋಗಿ ಆಕೆಯನ್ನು ಸಮಾದಾನ ಪಡಿಸಿದನು. ತಂದೆಯ ಉತ್ತರ ಕ್ರಿಯೆಯನ್ನು ನೆರವೇರಿಸಿ ನಷ್ಟವಾದ ಧರ್ಮವನ್ನು ಪುನ: ಸ್ಥಾಪಿಸಿ ಸಾಧು ಸಂತರನ್ನು ಸಮಾಧಾನ ಪಡಿಸಿದನು. ಪರಮಾತ್ಮನ ಧ್ಯಾನದಲ್ಲಿ ದೀರ್ಘಕಾಲ ಕಳೆಯುತ್ತಾ ರಾಜ್ಯಭಾರ ಮಾಡಿದನು.

ಕರ್ಾಡ ಭಾಷೆಯಲ್ಲಿ ಬರೆದ ಈ ಹರಿಕಥಾ ರೂಪದಲ್ಲಿರುವ ಚಂಪೂಕಾವ್ಯವನ್ನು ಯಕ್ಷಗಾನಕೃತಿಯಾಗಿ ಪರಿವರ್ತಿಸಲು ಅವಕಾಶವಿದೆ. ವಿವಿಧ ರಾಗ ವಿವಿಧ ತಾಳಗಳಿಂದ ರಚನೆಯಾದ ಹಾಡುಗಳು ಭಾಗವತಿಕೆಗೆ ಅನುಗುಣವಾಗಿ ಇದೆ.

೫.೨.೪ ಶೈಲಿ:- ಗುರು ಶ್ರೀಪತಿ ಶಾಸ್ತ್ರಿಗಳ ಸಾಹಿತ್ಯ ಶೈಲಿ ಸುಂದರವಾಗಿದೆ. ಅಪೂರ್ವ ಭಾಷೆಯಲ್ಲಿ ಈ ರೀತಿಯ ಸಾಹಿತ್ಯ ಸೃಷ್ಟಿ ಮಾಡಬೇಕಿದ್ದರೆ ವಿಶಿಷ್ಟ ಪ್ರತಿಭೆ ಬೇಕು. ಕಾವ್ಯವು ಸರಾಗವಾಗಿ ಮುಂದುವರಿಯುತ್ತದೆ. ಎಲ್ಲಿಯೂ ಮುಗ್ಗರಿಸುವುದಿಲ್ಲ. ಪದಲಾಲಿತ್ಯ ಅರ್ಥಗೌರವ, ಚತುರೋಕ್ತಿಗಳು ಎಲ್ಲರೊ ಮೆಚ್ಚುವಂತಿದೆ. ಅಲ್ಲಲ್ಲಿ ಬರುವ "ಸಂಜೀವ ಮ್ಹಳ್ಳಂ ದಿವ್ಯೌಷಧಿ ಅನಾಯಾಸೇನ" "ಪ್ರಳಯ ಮ್ಹಳ್ಳಲೊ ಅಹಂಕಾರು" ಮೊದಲಾದ ಸಂಸ್ಕೃತ ಭೂಯಿಷ್ಠ ವಾಕ್ಯಗಳು ಕಾವ್ಯಗೌರವವನ್ನು ಹೆಚ್ಚಿಸಿದೆ.

"ವಿಪಧಿ ಧೈರ್ಯಂ" "ವಿದ್ಯ ನತ್ಥಿಲ್ಲಂ ಜನ ತೇ ಪಶು ಸಮಾನ" ಬೈಲಾಂಕ ಜೂಂ ದೇರ್ನು ಕಸಣಿ ಕೆಲ್ಲಸಂ" (ಎತ್ತುಗಳಿಗೆ ನೊಗ ಇಟ್ಟು ಉತ್ತ ಹಾಗೆ) ಇಂತಹ ಗಾದೆಗಳು ಕಾವ್ಯದಲ್ಲಿ ವಿಶಿಷ್ಟ ಸ್ಥಾನವನ್ನು ಪಡೆದಿವೆ.

"ಯೆಕಡೇಕ ಕಾನದ್ಯಾ ಏಕಿ ಘಡಿ ಐಕ್ಕಾ । ವಿಗಡ ಯಾಕ ನಾ ಹಾಂತು ಅನುಮಾನ ನಕ್ಕಾ" ॥
"ಔಂಚಾ ಸಂಗತಯೌನು ವಾಚಿ । ಹಾಂತು। ವಂಚನ ನಾ ಕಾಯೆಂ ತೂ ಚೌಂಥಲೋಚಿ"

ಹೀಗೆ ಹಲವು ಕಡೆ ಬರುವ ಪ್ರಸಾನುಪ್ರಾಸಗಳು ಮನ ಸೊರೆಗೊಳ್ಳುತ್ತವೆ. ಅವರ ಸಾಹಿತ್ಯವನ್ನು ಅವಲೋಕಿಸಿದಾಗ ಅವರ ಪ್ರತಿಭೆ ಪಾಂಡಿತ್ಯದ ಅರಿವಾಗದೆ ಇರಲಾರದು.

ಅವರು ವೃತ್ತಗಳನ್ನು ರಚಿಸುವಾಗ ಛಂದಸ್ಸಿನ ಕಡೆ ಗಮನವಿತ್ತಂತೆ ಕಾಣಿಸುವುದಿಲ್ಲ. 'ಕುರ್ಚಿ ಮೇಜಿಣೆ ಕಾಯೆ ನಾ' "ಮಾಸ್ಟು" ಎನ್ನುವ ಪದ ಪ್ರಯೋಗ ಈ ಕೃತಿಯಲ್ಲಿ ಆದುದನ್ನು ಕಾಣಬಹುದು.

ಶ್ರೀಪತಿ ಶಾಸ್ತ್ರಿಗಳ 'ಪ್ರಹ್ಲಾದ ಚರಿತ್ರ'ವು "ಬಯಿಲೇಣಿ ದುದ್ಧಾಕ ವಿಷ" (ಹೆಂಡತಿಯಲ್ಲಿ ಹಾಲಿಗೆ ವಿಷ) ಇಲ್ಲಿಗೆ ನಿಂತಿತು. ಬಳಿಕ ಅಸ್ವಸ್ಥರಾಗಿಯೇ ಇದ್ದು ಎರಡು ಮೂರು ವರ್ಷಗಳ ಅನಂತರ ದೈವಾಧೀನರಾದಂತೆ ತಿಳಿದು ಬರುತ್ತದೆ. ವರಕವಿ ಬಾಣನ ಕಾದಂಬರಿಯ ಪೂರ್ವಾರ್ಧ "ಮರಣ ಮೇವ ಶ್ರೇಯ" ಎಂಬ ವಾಕ್ಯದಲ್ಲೇ ಕೊನೆಗೊಂಡಿದ್ದು ಮುಂದೆ ಅವನಿಂದ ಕಾವ್ಯ ರಚನೆ ಮಾಡಲಾಗಲಿಲ್ಲ. ಆ

ಮೇಲೆ ಅವನ ಮಗನು ಉತ್ತರಾರ್ಧವನ್ನು ಬರೆದನೆನ್ನುವುದು ಐತಿಹ್ಯ. ಮಹಾ ಕವಿಗಳಿಗೆ ಕೆಲವೊಮ್ಮೆ ಅಪಶಬ್ಧಗಳೇ ಅಮಂಗಲಕ್ಕೆ ಕಾರಣವೆನ್ನುವುದನ್ನು ಅಲ್ಲಗಳೆಯಲಾಗುವುದಿಲ್ಲ.

ಅಪೂರ್ಣ 'ಪ್ರಹ್ಲಾದ ಚರಿತ್ರ' ವನ್ನು ಬೊಳಂಜಡ್ಕ ಗಣಪತಿ ಭಟ್ಟರು ಪೂರ್ಣಗೊಳಿಸುವಲ್ಲಿ ಯಶಸ್ವಿಯಾಗಿದ್ದಾರೆ. ಇವರು ಬರೆದ ಎರಡು ವೃತ್ತಗಳಲ್ಲೂ ಛಂದೋ ಭಂಗ ಕಾಣುತ್ತದೆ. ಅಲ್ಲದೆ ವಿಷ ಕುಡಿದು ಏನೂ ಆಗದೆ ಅತ್ಯಾನಂದದಿಂದಿದ್ದ ಪ್ರಹ್ಲಾದ ಕೋಪಾವಿಷ್ಟನಾದ ಹಿರಣ್ಯ ಕಶಿಪುವಿನಲ್ಲಿ ತಂದೆಯ ಮೇಲಿನ ಗೌರವದಿಂದ "ಶೈವ ವೈಷ್ಣವು ಭೇದು ತೋ ಕಸೋ ಐಲೋ ಪಾವನ ಮಾನುಷ ಜಳ್ಮೊಚಿ ಹೊಳ್ಳೋ ಶಿವನಾರಾಯಣ ಕೀರ್ತನ ಕೆಲ್ಲೊ ಜೀವಾತ್ಮೊಚಿ ತೋ ಸಾರ್ಥಕದಾಲ್ಲೋ" ಎಂದು ಹರಿಹರರ ಅಭೇದವನ್ನು ಹೇಳುತ್ತಾರೆ.

ಶಾಸ್ತ್ರಿಗಳು ಬರೆದ ಮೊದಲ ಭಾಗದಲ್ಲಿ ಮಗನ ವಿದ್ಯಾಭ್ಯಾಸದ ಮೊದಲು ಹಿರಣ್ಯ ಕಶಿಪು "ಓಂ ನಮ: ಶಿವಾಯ" ಎನ್ನುವ ಪಂಚಾಕ್ಷರೀ ಮಂತ್ರ ಬರೆದು ಕೊಡುತ್ತಾನೆ. ಪ್ರಹ್ಲಾದನು ನೋಡಿ "ಓಂ ನಮೋ ನಾರಾಯಣಾಯ" ಎಂದು ಓದುತ್ತಾನೆ. ಅನಂತರ ಚಂಡಾಮರ್ಕರ ಪಾಠ ಶಾಲೆಯಲ್ಲಿ "ಓಂ ನಮೋ ನಾರಾಯಣಾಯ" ಎಂದು ಓದುತ್ತಾನೆ. ಇಲ್ಲೇಕೆ ಪ್ರಹ್ಲಾದನಿಗೆ ಅಭೇದ ಕಲ್ಪನೆ ಮೂಡಲಿಲ್ಲ. 'ನಮ: ಶಿವಾಯ' ಎಂದರೆ ಏನಾಗುತ್ತಿತ್ತು? ಎನ್ನುವ ಜಿಜ್ಞಾಸೆ ಉಂಟಾಗುವುದರಿಂದ ಮುಂದಿನ ಹೇಳಿಕೆ ವ್ಯತಿರಿಕ್ತವೆನಿಸುತ್ತದೆ.

ಒಟ್ಟಿನಲ್ಲಿ ಸಂಸ್ಕೃತ – ಕರ್‍ಹಾಡ ಮಿಶ್ರಿತ ಭಾಷೆಯಿಂದ ಚಂಪೂ ಖಂಡ ಕಾವ್ಯವೊಂದನ್ನು ರಚಿಸಿ ಕರ್‍ಹಾಡ ಸಾಹಿತ್ಯಕ್ಕೆ ಬುನಾದಿಯನ್ನು ಹಾಕಿ ಕೊಟ್ಟವರು. ಪಡ್ರೆ ದಿ| ಶ್ರೀಪತಿ ಶಾಸ್ತ್ರಿಗಳು. ಕಂಠಸ್ಥವಾಗಿ ಉಳಿಯುವಂತೆ ರಚಿಸಲ್ಪಟ್ಟ ಈ ಕೃತಿಯ ಸಾಮಾಜಿಕ ಸಾಹಿತ್ಯಿಕ ಮೌಲ್ಯಗಳು ಗಣನೀಯವಾಗಿದೆ.

### ೫.೩.೧ ಗಾಂದ್ರ ಸಾಹಿತ್ಯ

ಶೋಭಾನೆ ಹಾಡುಗಳನ್ನು ಕರ್‍ಹಾಡ ಭಾಷೆಯಲ್ಲಿ 'ಗಾಂದ್ರ' ಎನ್ನುವರು. ಈ 'ಗಾಂದ್ರ'ಗಳನ್ನು ಸಾಮಾನ್ಯವಾಗಿ ಮದುವೆಯ ಸಂದರ್ಭದಲ್ಲಿ ಹಾಡುತ್ತಾರೆ. ಈ ಗಾಂದ್ರ ಸಾಹಿತ್ಯ ಬಾಯಿಂದ ಬಾಯಿಗೆ ಹರಿದು ಬಂದು ಇಂದಿಗೂ ಕಂಠಸ್ಥ ರೂಪದಲ್ಲಿ ಉಳಿದಿರುವುದನ್ನು ಗಮನಿಸಿದರೆ ಮದುವೆಯ ಸಮಾರಂಭಗಳಲ್ಲಿ ಹಾಡುವ ಪರಿಪಾಠ ಹಿಂದಿನಿಂದಲೇ ರೂಢಿಯಲ್ಲಿತ್ತು ಎನ್ನುವುದನ್ನು ತಿಳಿಯಬಹುದು. ಇಂದೂ ಕೆಲವು ಕಡೆ ಈ ಗಾಂದ್ರಗಳು ಕೇಳಿ ಬರುತ್ತವೆ.

ಕನ್ನಡ ಭಾಷೆಯ ಶೋಭಾನೆ ಹಾಡುಗಳು ಕರ್‍ಹಾಡದಲ್ಲಿ ಸಾಕಷ್ಟು ಇದೆ. ಹೆಚ್ಚಿನ ಮಹಿಳೆಯರಿಗೂ 'ಗಾಂದ್ರ'ಗಳ ಜೊತೆಯಲ್ಲಿ ಕನ್ನಡ ಶೋಭನೆ ಹಾಡುಗಳೂ ಕಂಠಪಾಠವಾಗಿದೆ. ದ್ರೌಪದೀ ಸ್ವಯಂವರ, ಸುಭದ್ರಾ ಕಲ್ಯಾಣ, ರುಕ್ಮಿಣೀ ಸ್ವಯಂವರ, ಸತ್ಯಭಾಮಾ ಪರಿಣಯ ಕನಕಾಂಗಿ ಕಲ್ಯಾಣ, ಮಾಲೆ ಹಾಕುವ ಹಾಡು, ದಾರೆಯೆರೆದು ಕೊಡುವ ಹಾಡು ಮದುಮಗಳನ್ನು ಕಳುಹಿಸಿಕೊಡುವ ಹಾಡು, ಹಸೆಗೆ ಕರೆದ ಹಾಡು, ಅನ್ನ ಕೊಡುವ ಹಾಡು, ಮದುವಣಿಗೆ ಹೊರಟು ಬಂದ ಹಾಡು, ಮದುವಣಿಗರಿಗೆ ಅರಸಿನೆಣ್ಣೆ ಮಾಡುವ ಹಾಡು, ಸುಮತಿ ಕಲ್ಯಾಣ ಮುಂಡಾಸು ಕಟ್ಟುವ ಹಾಡು, ಚಿನ್ನ ಇಡುವ ಹಾಡು, ಬಾಗಿಲು ತಡೆಯುವ ಹಾಡು, ಸೀತಾ ಸ್ವಯಂವರ, ಜೋಡು ಹೆಂಡಿರ ಹಾಡು, ಪ್ರಸಾದ ಬೇಡುವ ಹಾಡು, ದುರ್ಗಾರತಿ, ಧೂಪಾರತಿ, ದೇವಿ ಆರತಿ ಸೀಮಂತದ ಹಾಡು, ಕೊರವಂಜಿ ಹಾಡು – ಹೀಗೆ ಸಾಕಷ್ಟು ಹಾಡುಗಳಿವೆ.

೫.೩.೨. ಸ್ವಾಗತ ಗಾಂಧ್ರ: ಗುರು ಶ್ರೀಪತಿ ಶಾಸ್ತ್ರಿಗಳು ಬರೆದ 'ಗಾಂಧ್ರ'ಗಳಲ್ಲಿ ಸ್ವಾಗತ ಗಾಂಧ್ರ ಒಂದಾಗಿದೆ. ಹೊರೆತು ಬೈಸರ್ಲಂ ಗಾಂಧ್ರ ಮತ್ತು ಬಾಗಿಲ ಅಡ್ಡೈಲ್ಲಂ ಗಾಂಧ್ರ ಎಂಬ ಇನ್ನೆರಡು 'ಗಾಂಧ್ರಗಳನ್ನು ಶ್ರೀಪತಿ ಶಾಸ್ತ್ರಿಗಳೇ ಬರೆದಿರುವುವರು. 'ಕವಿಕೆಲ್ಲಂ ಗಾಂಧ್ರ' ಎನ್ನುವ ಅಪ್ರಕಟಿತ ಗಾಂಧ್ರವೊಂದನ್ನು ಶ್ರೀಪತಿ ಶಾಸ್ತ್ರಿಗಳೇ ಬರೆದಿರಬೇಕೆಂಬ ಊಹೆ ಇದೆ.

ವಧುವಿನ ಮನೆಗೆ ವಿವಾಹಾರ್ಥವಾಗಿ ದಿಬ್ಬಣಿಗರು ಬಂದಾಗ ಅವರನ್ನು ಸ್ವಾಗತಿಸುವ ಹಾಡನ್ನು 'ಸ್ವಾಗತಗಾಂಧ್ರ' ಎನ್ನುವರು. ಇಲ್ಲಿ ಒಂಬತ್ತು ಪದ್ಯಗಳಿವೆ. ತಾನು ಬಡವ, ನಿಮ್ಮ ಘನತೆಗೆ ಸರಿಯಾಗಿ ಸತ್ಕರಿಸಲು ತನ್ನಲ್ಲೇನೂ ಇಲ್ಲವೆನ್ನುವ ವಿನಯ ಭಾವದೊಡನೆ ಮೊದಲು ಬಾಯಾರಿಕೆ ಸ್ವೀಕರಿಸಬೇಕೆಂದು ಹೇಳಲಾಗಿದೆ.

ಮದುವೆಯ ಸಂದರ್ಭದಲ್ಲಿ ಪೂರ್ವ ಸಿದ್ಧತೆಗಳೆಷ್ಟಿದ್ದರೂ ಸಾಲದು. ಕೆಲವೊಮ್ಮೆ ಕೊರತೆಗಳೂ ಕಂಡು ಬರುತ್ತವೆ.

ವಧುವಿನ ಮನೆಯಲ್ಲಿ ಚಪ್ಪರದಡಿಯಲ್ಲಿ ದಿಬ್ಬಣಿಗರು ಬಂದು ಅಸೀನರಾದಾಗ ಮನೆಯ ಯಜಮಾನ ಮತ್ತು ಇನ್ನೊಬ್ಬರು ಎದ್ದು ನಿಂತು –

"ಐಲೆಯ್ಯಾನೋ ನಮಸ್ಕಾರು। ಐಲ್ಲಲಂ ರೋಕದಾಲ್ಲಂ ಔಂಚೆರಿ ದಯದೇರುಂ ಹೊಳ್ಳ ಪುಣ್ಯಯೇಂ ಔಂಥಂ । ಫುಳ್ಳೆ ಜನ್ಮಾಂತುಲಂ ದುರ್ಲಭ ತಸಂ ನ್ಹೋಯೆ। ದಾಲ್ಲಂ ಸಂದರ್ಶನ ॥ ಐಲೆಯ್ಯಾನೋ ॥೧॥

(ಬಂದವರಿಗೆಲ್ಲ ನಮಸ್ಕಾರ, ಬಂದದ್ದು ಒಳ್ಳೆಯದಾಯಿತು, ನಮ್ಮಲ್ಲಿ ದಯೆ ತೋರಿ ಬಂದಿರಿ, ದೊಡ್ಡ ಪುಣ್ಯ ನಮ್ಮದು. ಹಿಂದಿನ ಜನ್ಮದಲ್ಲಿದು ದುರ್ಲಭ, ಸಂದರ್ಶನ ವಾಯ್ತು, ಬಂದವರಿಗೆಲ್ಲ ನಮಸ್ಕಾರ) ಬಂದವರನ್ನೆಲ್ಲಾ ನಮಸ್ಕರಿಸಿ ಸ್ವಾಗತಿಸುತ್ತಾರೆ. ಈ ಕ್ರಮ ಇದೇ ರೀತಿಯಲ್ಲಿ ಇಂದಿಗೂ ಮುಂದುವರಿಯುತ್ತಿದೆ.

"ಆಪತ್ತ ನಾಥೌಂ ಗೆಲ್ಲಂ। ಔಂಥಲಂ ಮಹಾಪಾಪ ಪರಿಹಾರುದಲ್ಲಂ। ತೋ ಪರಮಾತ್ಮ ಸ್ವರೂಪೇನ ಐಲ್ಲಸಂ। ಯೌಪ ದಲ್ಲಲಂ ಅಪರೂಪೇನ ಹಾಂಗಸಂ॥ ಐಲೆಯ್ಯಾನೊ॥೨॥

(ಕಷ್ಟವೆಲ್ಲ ಓಡಿ ಹೋಯಿತು. ಮಹಾಪಾಪ ಪರಿಹಾರವಾಯಿತು. ಆ ಪರಮಾತ್ಮ ಸ್ವರೂಪವೇ ಬಂದಂತಾಯ್ತು. ಅಪರೂಪಕ್ಕೆ ಹೀಗೆ ಇಲ್ಲಿಗೆ ಬಂದಿದ್ದೀರಿ)

"ಕಟ್ಟಡ ಸಮದಲ್ಲಂ ನಾ। ಜ್ಯಾಗ್ಯಾತ್ಲೋ ಬುದ್ಧಿ। ಮುಟ್ಟುತೋ ಸಾಂಗ್ಯಾಕ ನಾ। ಒಟ್ಟು ರಗಳೆ ಬಂದು ಕಟ್ಟು ನಾತ್ಥಿಲ್ಲಂ ಎಡವಟ್ಟ ಔಂಥಲಂ ಗೆತಿ । ಕೆಟ್ಟಯೇಂ ಕಡಗಟ್ಟ ॥ ಐಲೆಯ್ಯಾನೋ॥೩॥

(ಸರಿಯಾದ ಕಟ್ಟದವಿಲ್ಲ, ಜಾಗದ ಬುದ್ಧಿಮುಟ್ಟು ಹೇಳುವುದೇ ಬೇಡ, ಎಲ್ಲ ರಗಳೆ, ಬಂದು ಕಟ್ಟು ಇಲ್ಲದೆ ನಮ್ಮ ಕಾರ್ಯಕ್ರಮವೆಲ್ಲ ಗತಿಗೆಟ್ಟ ವ್ಯವಹಾರವಾಯಿತು)

"ಕುರ್ಚಿ ಮೇಜಿಣೆ ಕಾಯೆಂ ನಾ।ಹಾತ್ತರಿ ಹಾಳ್ಳೇ ವರ್ಸಾಕ ಯೇಕಿಯೇನ ಎರ್ಸಂ ಯೌಂಚೆಲ್ಯಾ ಜೌಂಚಾ ಸರ್ಶಾಂಕ ಸಮದಾಲ್ಲಂ ಕಶ್ಯಂಕಿತ್ತಣ ಏಕ ಅಸ್ಸಂ ಯೇಂ ಸಾಮಾನ ॥ ಐಲೆಯ್ಯಾನೋ ॥೪॥

(ಕುರ್ಚಿ ಮೇಜಿ ಏನಿಲ್ಲ, ಚಾಪೆ ತಂದರೆ ವರ್ಷಕ್ಕೆ ಒಂದು ಬರುವುದಿಲ್ಲ. ಯಾವತ್ತೂ ಬರುವ ನೆಂಟರಿಷ್ಟರಿಗೆ ಸರಿಯಾದ ವ್ಯವಸ್ಥೆ ಎಂಥದ್ದೋ! ಸಾಮಾನೆಲ್ಲ ಇಂಥದ್ದೇ)

“ಪನ್ನೀರ ಹಳ್ಳಂಸನಾ। ಊದುಬತ್ತ್ಯೋಣೆ ಖನ್ನೈಲೆ ಕಸಂ ದಾಲ್ಲೀನಾ। ತಾನ್ನೇಕ ದ್ಯಾಕ ಪಾನಕ ನಾ ಗೋಡಣೆ ಉದೋ । ಮನ್ನಣ ಕಶಿ ಕ್ಷಮಿ। ಪ್ಪುನ್ನಂ ಯೇಂ ದಯದೇರುಂ ॥ ಐಲೆಯ್ಯಾನೋ॥೫॥”

ನಿಮ್ಮ ಘನತೆಗೆ ಸರಿಯಾದ ವ್ಯವಸ್ಥೆ ಇಲ್ಲಿ ಇಲ್ಲ. ಇದ್ದ ವ್ಯವಸ್ಥೆಯಲ್ಲೇ ಸುಧಾರಿಸಿಕೊಂಡು ಹೋಗಬೇಕು. ನಿಮ್ಮ ಘನತೆಗೆ ತಕ್ಕಂತೆ ಸತ್ಕರಿಸಲು ಪನ್ನೀರು ತರಲಿಲ್ಲ. ಊದು ಬತ್ತಿಯೇ ಮೊದಲಾದುವು ಯಾವುದೂ ಇಲ್ಲ. ಬಾಯಾರಿಕೆ ಕೊಡುವುದಕ್ಕೆ ಪಾನಕವಿಲ್ಲಾ. ಬೆಲ್ಲ ಮತ್ತು ನೀರು ಸ್ವೀಕರಿಸಿ ಇದ್ದುದರಲ್ಲಿ ಹೊಂದಿಕೊಂಡು ಹೋಗಬೇಕು ಎಂದು ಶಿರಬಾಗಿ ಭಿನ್ನವಿಸುತ್ತಾರೆ.

“ಪ್ರತ್ಯೇಕ ದೌಂ ಸಾಂಗ್ಯಾನಾ । ಜಾಜಿಲವಂಗ ಪತ್ರೆಣೆ ಪಳ್ಯೋ ಮಡ್ಯಾನ। ಪಾತ್ತಂ ಹಾಂಗಚ್ಚಿಂ ಬರ್ಕತ್ತ ನಾಂತಿ ಇಂ ಪಳ್ಯಾ । ವೆತ್ತಣ ರೊಕ್ಕ । ಧೋರಾತ್ತಾಕ ತತ್ವಾರ ॥ ಐಲೆಯ್ಯಾನೋ ॥೬॥”

(ಪ್ರತ್ಯೇಕವಾಗಿ ಹೇಳುವುದಕ್ಕಿಲ್ಲ. ಜಾಜಿ ಲವಂಗ ಪತ್ರೆ ಮುಂತಾದವುಗಳು ನೋಡುವುದಕ್ಕೆ ಇಲ್ಲ. ಇಲ್ಲಿಯ ವೀಳ್ಯದೆಲೆ ಬರ್ಕತ್ತಲ್ಲ. ಹೊಗೆಸೊಪ್ಪಿಗೂ ತತ್ವಾರ)

ವೀಳ್ಯ, ಹೊಗೆಸೊಪ್ಪು, ಜಾಜಿ ಪತ್ರಿಲವಂಗ ಮಿಶ್ರಿತ ತಾಂಬೂಲದ ತತ್ವಾರವನ್ನು ತಿಳಿಸುತ್ತಾ ಮನೆಯವರು ಬಂದ ಅತಿಥಿಗಳನ್ನು ಸ್ವಾಗತಿಸುತ್ತಾರೆ.

“ತ್ಯೋಡು ಸಾಂಗಪ ಇಚ್ಚಾಕ । ಔಂಥೊಲೋ ಭಾರಿ । ಹೋಡು ತಪ್ಪುವೋ ಐಚ್ಚಾಕ । ಘೋಡೋ ಹಸ್ತಿಣೆ ಔಜ ವಾಡೀಕ ನಾ ಔಂಚಾ । ಬೋಡಾರ್ಲಂ ಬರಪಣು । ಸೋಡ್ರ ಮಜ್ಜಾ ಮನಕ ॥ ಐ ॥೭॥

(ಹೆಚ್ಚೇನು ಹೇಳುವುದು ಇಂದು ನಮ್ಮದು ಇದು ದೊಡ್ಡ ತಪ್ಪು. ಆನೆ ಕುದುರೆ ಇದು ಯಾವುದೂ ನಮ್ಮಲ್ಲಿ ವಾಡಿಕೆ ಇಲ್ಲ. ಇದೆಲ್ಲ ನಮ್ಮ ಹಣೆಯ ಬರಹವೆಂದು ನನ್ನ ಮನಸ್ಸಿಗೆ ತೋರುತ್ತದೆ)

“ದುಸ್ತಾನ್ನು ದೂರ್‍ಯಾಕ ನಾ। ಜ್ಞೈಯ್ಯೆಣೆ ಯೇಕ। ವಸ್ತು ಕರ್‍ಯೈಲ್ಲಂಸನಾ। ಕಸ್ತೂರಿ ಮಗರ್‍ಯಾಂ ಯಾ ಸರ್ತ್ಯೇಕ ಕ್ರಯ ಬಹು ಭರ್ತಿಣು ಮ್ಹಣ್ಣು ಹಾ । ಣ್ಣಡ್ಡೀ ರಾಬ್ಬಿಲ್ಲೀಲಿಂ ॥ಐ॥೮॥

(ಉಡುಗೊರೆಯನ್ನು ದೂರುವುದಕ್ಕೆ ಇಲ್ಲ. ಚಿನ್ನವೇ ಮೊದಲಾದುವನ್ನು ಮಾಡಿಸಲಿಲ್ಲ. ಕಸ್ತೂರಿ ಮಗರಿಗೆ ಈ ಸಲ ಕ್ರಯ ಜಾಸ್ತಿಯೆಂದು ತರದೇ ನಿಂತಿದ್ದೇವೆ).

“ಗಾಯೆ ಮ್ಯೆಶಿಣೆ ಕಾಯೆಂ ನಾ। ದೂದಣೆ ಥೆಂಬೋ । ದಾಯೆಂ । ಮ್ಹಳ್ಯೇರಿ ಮೇಳ್ಯಾ ನಾ । ಸೋಯೆ ತಾನ್ನೇನೆ ದೌಂಚೆ ಆಯಾಸ। ರಾಭ್ಭುನು । ದಾಯೆಂ ಕಶ್ಯಲ್ಯಾಕೀ ದೌಂ । ದಾಯೆಂ ತಾನ್ನೇಕಾಣ್ಣು ॥ಐ॥೯॥”

(ದನ ಎಮ್ಮೆ ಏನಿಲ್ಲ, ಹಾಲು ಸ್ವಲ್ಪ ಬೇಕೆಂದರೂ ಸಿಗಲಿಕ್ಕಿಲ್ಲ. ಹಸಿವು ಬಾಯಾರಿಕೆಯಿಂದಾಗುವ ಆಯಾಸ ನಿಂತಾಗಬೇಕು ಯಾವುದಕ್ಕೂ ಬಾಯಾರಿಕೆ ಕುಡಿದಾಗಬೇಕು)

ಹೀಗೆ ಮದುವೆ ಸಮಾರಂಭದ ಸಿದ್ಧತೆಗಳನ್ನು ಉಲ್ಲೇಖಿಸುತ್ತಾ ಎಲ್ಲದರ ಕೊರತೆಯನ್ನು ಹಾಸ್ಯ ಪೂರ್ಣ ಶೈಲಿಯಲ್ಲಿ ಈ ಗಾಂದ್ರದಲ್ಲಿ ವಿಡಂಬಿಸಲಾಗಿದೆ. ಇಲ್ಲಿ ಆಡಂಬರವಿಲ್ಲದ ಸರಳ ಮದುವೆಯ ಚಿತ್ರಣವಿದೆ.

೫.೩.೩ ಹೊರೆತು ಬ್ಯಾಸರ್ಲಂ ಗಾಂದ್ರ (ಮದುಮಗ ಹೊರಟ ಶೋಭಾನೆ ಹಾಡು)

ಕೈಲಾಸ ಪರ್ವತದಿಂದ ಪರಮೇಶ್ವರನು ದಿಬ್ಬಣಿಗನಾಗಿ ಹೊರಟ ಕಥಾವಸ್ತುವನ್ನು ಹತ್ತು ಪದ್ಯಗಳಲ್ಲಿ ಹೇಳಲಾಗಿದೆ. ದಿಬ್ಬಣಿಗರಾಗಿ ಹೋಗಲು ಇಂದ್ರನೇ ಮೊದಲಾಅದ ಮೂವತ್ತ ಮೂರು ಕೋಟಿ ದೇವತೆಗಳು

ಪರಿವಾರ ಸಹಿತ ಬ್ರಹ್ಮ ಸರಸ್ವತಿಯರು, ಮುನಿಜನಸ್ತೋಮದೊಡನೆ ಲಕ್ಷ್ಮೀ, ನಾರಾಯಣರು, ಕೈಲಾಸಕ್ಕೆ ಬಂದರು. ಮತ್ತೆ ಶಿವನು ವರನಾಗಿ ಅಲಂಕೃತಗೊಂಡು ಹೊರಟನು.

"ಭಾಂಗಾರಾ ಧಾರ್ಯಾನ್ನಂ ಧೋತ್ರ ನೇಸೌನು। ವಿಂಗಡ ಏಕ ಉತ್ತೇರಿಲೆ ಘಾನ್ನು ।ಅಂಗಾಕ ಗಾಂದ ಕಸ್ತೂರಿ ಲೇಪನ ಕರ್ನು । ಭಂಗಾರಾ ಜ್ನುಯ್ಯೆಂಣೆಂ ಲೌನು ಸಂತೋಷೇನ । ಶೃಂಗಾರು ಕರ್‍ಯಾಕ ಸೂರೂಕೆಲ್ಲೋ ।ಶೋಭಾನ॥

ಗಂಡಿನ ಕಡೆಯ ದಿಬ್ಬಣ ಹೊರಡುವ ಸಾಂಪ್ರದಾಯಿಕ ಸಂಭ್ರಮವನ್ನು ಔಚಿತ್ಯ ಪೂರ್ಣವಾಗಿ ವರ್ಣಿಸಿರುವುದು ಅತ್ಯಂತ ಮಹತ್ವಾದ್ದಾಗಿದೆ. ವರನು ಮದುವೆಯ ದಿನ ಉಡುವ ವಸ್ತ್ರಗಳು ತೊಡುವ ಆಭರಣಗಳ ವಿವರಣೆ ಇಲ್ಲಿದೆ.

ಚಿನ್ನದ ಬಣ್ಣದ ಧೋತಿಯನ್ನುಡಿಸಿ ಹೆಗಲಿಗೊಂದು ಉತ್ತರೀಯವನ್ನು ಹಾಕಿ ಮೈಗೆ ಗಂಧ ಕಸ್ತೂರಿಯ ಲೇಪನ ಮಾಡಿ ಚಿನ್ನದ ಆಭರಣಗಳನ್ನು ತೊಡಿಸಿ ಸಂತೋಷದಿಂದ ಶೃಂಗಾರ ಮಾಡಲು ಆರಂಭಿಸಿದರು.

ವರನ ಕಡೆಯ ಶೃಂಗಾರದ ವರ್ಣನೆಯನ್ನು ಕವಿ ಈ ರೀತಿಯಾಗಿ ಚಿತ್ರಿಸಿದರೆ, ವಧುವಿನ ಕಡೆಯ ವರ್ಣನೆಯೂ ಒಟ್ಟೊಟ್ಟಿಗಿದೆ.

"ವಜ್ರ ಕುಂಡಲಂ ಕಾಣ್ಣು ಕನ್ನಾಕ ಲೌನು । ತಾಜ್ಜಾ ಸಂಗತ ದೋನಿ ಒಂಟ್ಯೊ ಘಡೌನು ॥ ಉಜ್ಜಾಕ ಸಮದೌನು ಥಳಥಳ ದೌಂಣ್ಣಂಲಿಂ । ಗೆಜ್ಜೆ ಘಂತಿಲ್ಲಿಂಲಿಂ ಗಗ್ಗರೆ ಪೈಂದಣಂ। ದೋನಿ ಪಾಯಾಂಕ ಸಮಲ್ಯೆಲಿಂ ॥ಶೋಭಾನೆ॥"

ವರ್ಣನೆ ಮನೋಹರವಾಗಿದೆ. ವಜ್ರ ಕುಂಡಲದ ಜೊತೆಯಲ್ಲಿ ಒಂಟಿಯನ್ನು ಜೋಡಿಸಿ ಕಿವಿಗೆ ಧರಿಸಿ ಥಳಥಳವಾಗಿ ಹೊಳೆಯುವ ಗೆಜ್ಜೆ ಸುರಿದಿರುವ 'ಗಗ್ಗರೆ ಪೈಂದಣಂ' ವೆಂಬ ಕಾಲ್ಗೆಜ್ಜೆಯನ್ನು ಎರಡೂ ಕಾಲುಗಳಿಗೆ ಸರಿಯಾಗಿ ತೊಡಿಸಿದರು.

ಕರ್ಹಾಡರಲ್ಲೂ ಇದೇ ರೀತಿಯ ಶೃಂಗಾರ ಕ್ರಮ ವರನಿಗೂ ವಧುವಿಗೂ ನಡೆಯುತ್ತಿದೆ. ದಿಬ್ಬಣ ಹೊರಡುವಾಗ ವರನ ಹಿಂದೆ ಮುಂದೆ ಪೂರ್ಣ ಪಾತ್ರಗಳನ್ನು ಹಿಡಿದ ಲಕ್ಷ್ಮೀ ಮತ್ತು ಸರಸ್ವತಿಯರು ಅಲ್ಲದೆ ಜಲಪೂರ್ಣ ಕಲಶ, ಕನ್ನಡಿ, ಕುಂಕುಮ, ಗಂಧ ಹೂಗಳಿರುವ ತಟ್ಟೆಯನ್ನು ಹಿಡಿದುಕೊಂಡು ಶಚಿಯೂ ಮುಂದಿನಿಂದ ಹೋದರು. ಈ ಕ್ರಮ ಇಂದಿಗೂ ಕರಾಡಲ್ಲಿ ರೂಢಿಯಲ್ಲಿರುವುದನ್ನು ಕಾಣಬಹುದು.

"ಫುಳ್ಳೆಂ ಮಾಗ್ಗಿಲೆಂ ಪೂರ್ಣಪಾತ್ರಂ ಧರ್ಜಣ್ಣು । ಗೆಲ್ಲೆ ಲಕ್ಷ್ಮಿಣೆ ಸರಸ್ವತಿ ದೊಗ್ಗಿ ಕೂಣ್ಣು ।ಭರ್ಲಲೊ ಕಲಶು ಕನ್ನೇಟಿ ಕುಂಕುಮ ಗಾಂದ । ಫುಲ್ಲಂ ಸಮೇತ ದೇರ್ಲಲಂ ಥಾಟ ಕಂಜಣ್ಣು । ಗೆಲ್ಲೀ ತೀ ಫುಳ್ಳೆಂ ಶಚೀ ದೇವಿ ॥ ಶೋಭಾನೆ॥"

೫.೩.೮. ಬಾಗಿಲು ಅಡ್ವೈಲಂಗಾಂದ್ರ (ಬಾಗಿಲು ತಡೆಯುವ ಶೋಭಾನೆ)

ಶ್ರೀ ಕೃಷ್ಣನು ರುಕ್ಮಿಣಿಯನ್ನು ವಿವಾಹವಾಗಿ ತನ್ನ ಮನೆಗೆ ಬರುವಾಗ ತಂಗಿ ಸುಭದ್ರೆಯು ಬಾಗಿಲು ಹಾಕಿ ಒಳಗೆ ಪ್ರವೇಶಿಸದಂತೆ ತಡೆಯುವುದೇ ಇದರ ಕಥಾವಸ್ತು.

"ದ್ವಾರಕಾ ನಗರಾಂಟುಂ ಶ್ರೀಕೃಷ್ಣದೇವಾ ಕೈ। ಧಾರ ದೌಂ ಪಾಂತ್ಸಂ ದೀಶಿಂ। ನಾಗಂತಣೆ ಸಾರುನುಂ ಘ್ಯೆಂಟು ತಶಿಂ। ರುಕ್ಮಿಣಿಣೆ ತೋ ಯೇರಿ ದೆಖ್ಖುನು ತಾಂಚಾಶಿಂ। ಫುಡೆ ಯೌನು ರಾಶಿ। ದೂರಿ ತಾಂಥೆಲ್ಲ್ಯಾ

ಮೇಳುಸಾಂಥೊಲೊ ಭಾರಿ ಪಂಗಡು ಕೂಣ್ಣು ಬಾಗಿಲ। ಭರಿ ರಾಬ್ಬುನು ವಾಟ ಬಾಂದುಂ ವಿ । ತ್ಸಾರ್ರ ಸೌಭದ್ರೆ ಕೃಷ್ಣ ದೇವಾಣಿ । ವೇರ ತೂಂ ಖ್ಯೆಣ್ಣಾ ಶ್ರೀ ಕೃಷ್ಣಣ್ಣಾ ।"

ದ್ವಾರಕೆಯಲ್ಲಿ ಶ್ರೀ ಕೃಷ್ಣನು ರುಕ್ಮಿಣಿಯನ್ನು ವಿವಾಹವಾಗಿ ಐದು ದಿನದ ಮದುವೆ ಮುಗಿದು 'ನಾಗಂತಣಿ' (ನಾಗವಲ್ಲೀ ಸಮಾರಂಭ) ಮುಗಿಸಿ ರುಕ್ಮಿಣಿಯ ಜೊತೆಯಲ್ಲಿ ಶ್ರೀ ಕೃಷ್ಣ ಬರುವುದನ್ನು ಕಂಡು ಅವರಿಗಿಂತ ಮೊದಲು ಸುಭದ್ರೆ ಹೆಂಗಳೆಯರನ್ನೆಲ್ಲಾ ಸೇರಿಸಿ ಬಾಗಿಲಲ್ಲಿ ನಿಂತು ದಾರಿ ಬಿಡದೆ ಕೃಷ್ಣನಲ್ಲಿ 'ವೇರ ತೂಂ ಖ್ಯೆಣ್ಣಾ ಶ್ರೀಕೃಷ್ಣಣ್ಣಾ' ಎಂದು ಪ್ರಶ್ನಿಸುತ್ತಾಳೆ.

ಮಾತಾಡದೆ ಹೆಂಡತಿಯ ಜೊತೆಯಲ್ಲಿ ಮುಂದಿನಿಂದ ಹೋಗಬೇಡ. ನಿನ್ನಲ್ಲಿ ನನ್ನದೊಂದು ಮಾತಿದೆ. "ಯಾ ಲೋಕಾಂತುಂ ತ್ಸಾಲ್ಲುಂಚಿ ತ್ಯಾಲ್ತಿ ತುಕ್ಕ। ಹಾವೆಂ ಸಾಂಗುನಕ್ಕ ॥ ಈ ಲೋಕದಲ್ಲಿ ನಡೆಯುವ ರೂಢಿ ಇದು. ಅದನ್ನು ನಿನಗೆ ನಾನು ಹೇಳಬೇಕಾಗಿಲ್ಲ. ನೀನು ಎಲ್ಲವನ್ನು ತಿಳಿದವ. ನಿನ್ನ ಹೇಳಿಕೆಯಿಂದಲೇ ಪ್ರಪಂಚ ನಡೆಯುತ್ತಿದೆ. ನನ್ನ ಮನದ ಬೇಡಿಕೆ ಏನೆಂದು ತಿಳಿದು, ನೀನಿದನ್ನು ಕೊಡದಿದ್ದರೆ ಬಾಗಿಲು ತೆರೆದು ಒಳಗೆ ಹೋಗಲು ಬಿಡುವುದಿಲ್ಲ. ದಯವಿಟ್ಟು ಇಷ್ಟಾರ್ಥ ನೀಡೆಂದು ಸುಭದ್ರೆ ಪ್ರಾರ್ಥಿಸುತ್ತಾಳೆ. ಅದಕ್ಕೆ ಕೃಷ್ಣನು ನನ್ನ ಮನೆಯಲ್ಲಿದ್ದುದೆಲ್ಲವನ್ನೂ ಕೊಂಡು ಹೋಗೆನ್ನುತ್ತಾನೆ. ಸೀರೆ, ರವಕೆ, ಆಭರಣ ಮೊದಲಾದುದನ್ನು ಕೊಡುತ್ತೇನೆ. ನನ್ನ ಮಾನವನ್ನು ತೆಗೆಯದೆ ಬಾಗಿಲಿಂದ ಸರಿದು ನಿಂತು ಒಳಗೆ ಹೋಗಲು ಅನುವು ಮಾಡಿಕೊಡೆಂದು ಕೃಷ್ಣನು ಸುಭದ್ರೆಯೊಡನೆ ಕೇಳಿಕೊಳ್ಳುತ್ತಾನೆ. ಕೃಷ್ಣ ಒಂದು ಸಣ್ಣ ವಿಷಯಕ್ಕೆ ವಿಚಲಿತನಾದುದನ್ನು ಸೊಗಸಾದ ಶೈಲಿಯಲ್ಲಿ ಭಾವಪೂರ್ಣವಾಗಿ ಕವಿ ಚಿತ್ರಿಸಿದುದನ್ನು ಇಲ್ಲಿ ಕಾಣಬಹುದು.

ಬಾಗಿಲು ತಡೆದು ಒಳಬಿಡದೆ ಅಣ್ಣನನ್ನು ಸತಾಯಿಸುತ್ತಿದ್ದ ಸುಭದ್ರೆ ಕೊನೆಗೂ ಕೃಷ್ಣ ರುಕ್ಮಿಣಿಯರಲ್ಲಿ

"ಪೂತು ದಾಲ್ಲೆರಿ ಯಾ ಭೂಲೋಕಾಕ ರಾವೋ ದೌಂ । ನೀತೀನೆ ಸಜ್ಜನಾಂಕ । ಪಾಲಿಪುನು ಪ್ರಖ್ಯಾತಿ ದೌಂ ಬಹುವರ್ಸಾಂಕ। ದಾಲ್ಲೇರಿ ಧೂವಲೇ ತುಂ ತುಥ್ಥೆಲ್ಯಾ ಪುತ್ತಾಕ । ಬ್ಯಾಲಣು ಏಕ। ಪ್ರೀತಿ ಪೂರ್ವಕ ವಚನ ಸಾಂಗುನು ನೀತಿವಂತ ಜನಾಂಚ ಫುಳ್ಳೆನ । ಪಾತ ಫೋಡಿ ದೆವೋನು । ಬ್ಯಾಲ ಸಮೇತ ವೆತ್ತಣ ಸೊಡ್ರಂ ಬಾಗಿಲ ॥ ದಯದೇರುಂ ದೀಣ್ಣಾ ಶ್ರೀಕೃಷ್ಣಣ್ಣಾ॥"

ನಿನಗೆ ಮುಂದೆ ಹುಟ್ಟುವ ಮಗು ಗಂಡಾದರೆ ರಾಜ್ಯ ಭಾರ ಮಾಡಿ ಹೆಸರು ವಾಸಿಯಾಗಲಿ, ಹೆಣ್ಣಾದರೆ ನನ್ನ ಮಗನಿಗೆ ಕೊಡಬೇಕೆಂದು ಕೇಳುತ್ತಾಳೆ ಕೊಡುತ್ತೇನೆಂದು ಕೇವಲ ಬಾಯ್ದೆರೆಯಾಗಿ ಹೇಳಿದರೆ ಸಾಲದು, ನೀತಿವಂತ ಜನರ ಸಮಕ್ಷಮ ಎಲೆ ಅಡಿಕೆ ಕೊಟ್ಟು ಮಾತು ಕೊಟ್ಟರೆ ಮಾತ್ರ ದಾರಿ ಬಿಡುತ್ತೇನೆಂದುದಕ್ಕೆ ಕೃಷ್ಣ ಒಪ್ಪುತ್ತಾನೆ. ಶಿವ ಸೂರ್ಯ ಚಂದ್ರ ಬ್ರಹ್ಮಾದಿಗಳನ್ನು ಸಾಕ್ಷಿಯಿಟ್ಟು ಭಾಷೆ ಕೊಟ್ಟಾಗ ದಾರಿ ಬಿಡುತ್ತಾಳೆ,. ಇಂತಹ ಕ್ರಮ ಕರ್ಾಡರಲ್ಲಿ ಇಂದಿಗೂ ಇದೆ. ಇವರಲ್ಲಿ ಹಿಂದಿನಿಂದಲೂ ಮಾವನ ಮಗಳನ್ನೇ ಮದುವೆಯಾಗುವ ರೂಢಿಯಿತ್ತೆನ್ನುವುದು ಸ್ಪಷ್ಟವಾಗುತ್ತದೆ.

೫.೩.೫ ಕವಿಕೆಲ್ಲಂ ಗಾಂದ್ಸ್

ಶ್ರೀ ಕೃಷ್ಣನ ಬಾಲಲೀಲೆಗಳನ್ನು ವಸ್ತುವಾಗುಳ್ಳ ಸುಂದರ ಹಾಡಿದು.

"ನಂದ ಗೋಕುಲಾಂತುಂ । ಕೃಷ್ಣಾಚ ಸನ್ನಾಂತುಂ । ಕಶ್ಯಂಕೆಲ್ಲಂ ಗೌಳಿಣೀ ಐಕ್ಕ । ಸಂಗಾತಿ ಚೆಡ್ವಾಂಚ । ಸಂಗಾತ ಖೇಳಾತ । ಕರಿ ಥಾತ್ತಿಲಿ ಲೂಟಿ ಮಾಣ ರಡ್ರೀ। ಗೌಳಿಣೀಂತ ರಡತ । ಸಾಂಗರೀ ತೀಂ ಪೋರಂ । ಕೃಷ್ಣಾಥಲಂ ದೂರ ಹಕ್ಕಡ್ಯೆಲೇ।"

ನಂದಗೋಕುಲದಲ್ಲಿ ಮಕ್ಕಳ ಜೊತೆ ಆಟವಾಡುತ್ತಾ ಇದ್ದ ಕೃಷ್ಣ ಒಂದಲ್ಲ ಒಂದು ವಿಧದಲ್ಲಿ ತುಂಟಾಟದಲ್ಲೇ ಮಗ್ನನು. ಇತರ ಗೊಲ್ಲತಿಯರ ಮಕ್ಕಳನ್ನು ಪೀಡಿಸಿ ಅವರ ಜೊತೆ ಆಟವಾಡಿ, ದೂಡಿ ಹಾಕಿ, ರಕ್ತ ಬರಿಸಿ ಅಳುತ್ತಾ ಯಶೋದೆಯಲ್ಲಿಗೆ ಬಂದು ದೂರು ಕೊಡುವ ಮಕ್ಕಳ ಪಾಡು ಇಲ್ಲಿ ಹಾಡಾಗಿ ಬಂದಿದೆ. ಗೊಲ್ಲತಿಯರಿಗೆ ತಮ್ಮ ಮಕ್ಕಳನ್ನು ಸಾಂತ್ವನ ಪಡಿಸಿ ಸಾಕಾಗಿ ಹೋಗುತ್ತದೆ. ಕೃಷ್ಣನ ಲೂಟಿ ತಡೆಯುವುದಕ್ಕೆ ಅವರಿಗೆ ಅಸಾಧ್ಯವಾಗುತ್ತದೆ. ಮಕ್ಕಳು ಬಂದು ತಾಯಿಯಲ್ಲಿ ದೂರು ಕೊಡುತ್ತಾರೆ.

"ಅಮ್ಮ ಪಳೆ ಮುಕ್ಕಾ ಕೃಷ್ಣೇನ ಮಾರ್ಲ್ಯೋಲೋ। ಫೋಡೋ ಮ್ಹಣ್ಣು ಫೇಳ್ಳೋ ಮಜ್ಜವೋರಿ ॥ ಮಗ್ಗಿಲೆಂಟು ಫೇಣ್ಣುಂ ಲೊಕ್ಕೋಂ ಫಲ್ಲೊ ಮುಕ್ಕ। ಪಯಾಂ ಧರ್ನುಂ ಒಡ್ಡಿತಾಂ ಬರೀಕ ಲಾಗಲಂ। ಹಾತು ದಲ್ಲೊ ವೆತ್ಥ । ಮತ್ಥ್ಯಾಂ ಲ್ಲಾಗುಂ ರಗಿತ ಐಲಂ ಪಳೇ"

ಕೃಷ್ಣ ನನಗೆ ಏಟುಕೊಟ್ಟ. ಹಿಂದಿನಿಂದ ಬಂದುಕುದುರೆ ಎಂದು ನನ್ನ ಮೇಲೆ ಏರಿ ದೂಡಿ ಹಾಕಿ ಹೋದ. ನನ್ನ ಕಾಲೆಳೆದು ಪಕ್ಕೆಲುಬುಗಳಿಗೆ ನೋವುಂಟು ಮಾಡಿದ. ಕೈಗೆ ನೋವಾಯ್ತು. ತಲೆಗೆ ಪೆಟ್ಟಾಗಿ ರಕ್ತ ಬಂತು ನೋಡು ಎಂದು ಮಕ್ಕಳು ಕೃಷ್ಣನ ಬಗ್ಗೆ ದೂರಿದಾಗ ಅವನು ನಾಳೆ ಬರ್ಲಿ ಅವನ ಬೆನ್ನಿನ ಸಿಪ್ಪೆ ಸುಲಿಯುತ್ತೇನೆ. ಅಡ್ರು ತೆಗ್ದು ಎರಡು ಕೊಡ್ತೇನೆ ಎಂದು ಮಕ್ಕಳನ್ನು ಸಂತೈಸುತ್ತಾಳೆ ತಾಯಿ.

ಬಿದ್ದು ಸಿಪ್ಪೆ ಹೋದ ಭಾಗಕ್ಕೆ ತಾಯಿ ಬಿಸಿ ನೀರಿನ ಶಾಖ ಕೊಡುತ್ತಾಳೆ. ನಾಳೆ ಆಟಕ್ಕೆ ಹೋಗಬೇಡ ಎನ್ನುತ್ತಾಳೆ. ಆ ವಿಚಾರ ಕೃಷ್ಣನಿಗೆ ತಿಳಿದು ಮರು ದಿನ ಬರುತ್ತಾನೆ. ಹಿಂಬಾಗಿಲಿಂದ ನುಗ್ಗಿ ಎತ್ತರದಲ್ಲಿ ಪಾತ್ರೆಯಲ್ಲಿಟ್ಟ ಬೆಣ್ಣೆಯನ್ನು ಎಡದ ಕೈಯಿಂದ ತೆಗೆದು ತಿನ್ನುತ್ತಾನೆ. ಮಣ್ಣಿನ ಪಾತ್ರೆಯಲ್ಲಿ ಕಾಯಿಸಿಟ್ಟ ಹಾಲನ್ನೆಲ್ಲ ಕುಡಿದು ಮಡಿಕೆಯನ್ನೇ ದೂಡಿ ಹಾಕುತ್ತಾನೆ. ಶಬ್ದ ಕೇಳಿ ಗೊಲ್ಲತಿ ಬಂದಾಗ ಓಡಿ ಹೋಗುತ್ತಾನೆ. ಹೋಗುವಾಗ ಪಾತ್ರೆಗಳನ್ನು ಎಡವಿ ಜಾರಿ ಬೀಳುತ್ತಾನೆ. ಅಲ್ಲೇ ಹಾಲು, ಮೊಸರು ತುಂಬಿದ ಪಾತ್ರೆಗಳಿರುತ್ತದೆ. ಎಲ್ಲಾ ಮನೆಗಳಲ್ಲೂ ಈ ರೀತಿ ಬೆಣ್ಣೆ ತಿಂದು ಸ್ನೇಹಿತರಿಗೂ ಕೊಡುತ್ತಾ ಮಡಕೆಗಳನ್ನು ಒಡೆಯುತ್ತಾ ಮುಂದುವರಿಯುತ್ತಾನೆ. ಇನ್ನೊಂದುಮನೆಯಲ್ಲಿ ಗೊಲ್ಲತಿಯ ಕೈಗೆ ಸಿಕ್ಕಿ ಬೀಳುತ್ತಾನೆ. ತಾಯಿ ಯಶೋದೆಯಲ್ಲಿಗೆ ದೂರು ಕೊಡಲು ಬೀದಿಯಲ್ಲಿ ಅವನನ್ನು ಎಳೆಕೊಂಡು ಹೋಗುವಾಗ ಗೊಲ್ಲತಿಯು ಉಟ್ಟ ಸೀರೆ ಎಳೆದು ಎಡದ ಕೈಯಿಂದ ಮುದ್ದೆ ಮಾಡಿ ದೂರ ಬಿಸಾಡುತ್ತಾನೆ. ಸೀರೆ ಉಡುವುದಕ್ಕೆ ಕೃಷ್ಣನ ಕೈ ಬಿಟ್ಟಾಗ ಅವನು ಗುಡ್ಡೆ ಏರಿ ಇವರ ಕೈಗೆ ಸಿಕ್ಕದೆ ಓಡಿ ಹೋಗುತ್ತಾನೆ.

ಯಶೋಧೆಯಲ್ಲಿ ದೂರಿತ್ತಾಗ ಇತರ ಸುತ್ತಮುತ್ತಲಿನ ಗೊಲ್ಲತಿಯರೂ ಬಂದು ಎಲ್ಲರೂ ಕೃಷ್ಣನ ಬಗ್ಗೆ ದೂರು ಹೇಳುವವರೇ ಮಕ್ಕಳನ್ನು ನಾನು ಹೊಡೀಲಿಲ್ಲ, ದೂಡಿ ಹಾಕಲಿಲ್ಲ. ಅವರ ಮಕ್ಕಳಿಗೆ ಅವರೇ ಏಟು ಕೊಟ್ಟು ನನ್ನ ಮೇಲೆ ಆಪಾದನೆ ಹೊರಿಸುತ್ತಾರೆ. ನಾನು ಅವರ ಮನೆಗೆ ಹೋಗಲೇ ಇಲ್ಲ ಮುಂತಾಗಿ ಕೃಷ್ಣ ತಾಯಿ ಯಶೋದೆಯೊಡನೆ ಹೇಳುತ್ತಾನೆ.

ಗೌಳಿಣಿಯರು ದೂರು ಕೊಟ್ಟು ಹಿಂತಿರುಗುವಾಗ ಮರ ಒಂದು ಬಿದ್ದು ಅವರಿಗೆ ಭಯ ಹುಟ್ಟುತ್ತದೆ. ಕೃಷ್ಣನನ್ನು ಯಶೋದೆ ಕಡೆವಕಲ್ಲಿಗೆ ಕಟ್ಟಿ ಹಾಕಿ ಹಾಲು ಕರೆಯಲು ಹೋಗಿದ್ದಳು. ಅಂಗಳದಲ್ಲಿದ್ದ ಮರಗಳು ಉರುಳಿ ಬೀಳುತ್ತವೆ. ಆ ಮರಗಳ ಎಡೆಯಲ್ಲೇ ಕಡೆವ ಕಲ್ಲನ್ನು ಎಳೆದುಕೊಂಡು ಹೋಗುವಾಗ ದೊಡ್ಡ ಶಬ್ದವಾಗಿ ಮರ ಉರುಳುತ್ತದೆ.

ಶಬ್ದ ಕೇಳಿ ಊರವರೆಲ್ಲ ಸೇರುತ್ತಾರೆ. ಯಶೋಧೆಯ ಭಯ ಹೇಳುವುದೇ ಬೇಡ. ಅಲ್ಲಿಗೆ ಬಂದಾಗ ಕೃಷ್ಣ ಹೆದರಿ ಅಳುತ್ತಿದ್ದಾನೆ. ಯಶೋದೆ ಬೇಗನೆ ಹಗ್ಗ ಬಿಚ್ಚಿ "ನನ್ನ ಭಾಗ್ಯ ಈ ಮಗು ಉಳಿದದ್ದು;

ಹೆದರಿಕೆಯಾಯ್ತೋ ನಿನಗೆ, ದೇವರೇ ಇವನನ್ನು ಕಾಪಾಡಿದ್ದು". ಎಂದೆಲ್ಲಾ ತಿಳಿದು ಕೊಳ್ಳುತ್ತಾಳೆ. ನಂದಗೋಪ ಬಂದು ವಿಷಯ ತಿಳಿದು ಸಿಟ್ಟುಗೊಂಡು ಯಶೋದೆಯೊಡನೆ ಕೃಷ್ಣನನ್ನು ಬಿಟ್ಟು ಬಿಡುತ್ತಾನೆ. ಈ ವಿಷಯ ತಿಳಿದು ಐನ್ನೂರು ಜನ ಸೇರಿದರು. ಕೃಷ್ಣನಿಗೆ ದೃಷ್ಟಿ ತಾಗೀತೆಂದು ಕುರ್ದಿ ನೀರಿನಿಂದ ದೃಷ್ಟಿ ತೆಗೀತಾರೆ. ಹೆಂಗಸರಿಂದಲೇ ಎಲ್ಲವೂ ಆಗುವುದು. ಮಕ್ಕಳಿಗೆ ಏನು ಗೊತ್ತಿರುತ್ತದೆ ಎನ್ನುತ್ತಾ ಭಯ ಭೀತನಾದ ಕೃಷ್ಣನ ಮುಂದೆ ಬತ್ತಿಗಳನ್ನು ನಂದಿಸಿ ಭಯ ಹೋಗಲಾಡಿಸುತ್ತಾರೆ. ಕರ್ಹಾಡರಲ್ಲಿ ಈಗಲೂ ಸಣ್ಣ ಮಕ್ಕಳಿಗೆ ಸಾಯಂಕಾಲದ ಹೊತ್ತು ದೃಷ್ಟಿ ತೆಗೆಯುವ ಕ್ರಮ ರೂಢಿಯಲ್ಲಿದೆ.

ನಾರದ ಶಾಪದಿಂದ ಕುಬೇರನ ಇಬ್ಬರು ಮಕ್ಕಳು ಮರವಾಗಿದ್ದರು. ಅವರು ಪೂರ್ವರೂಪವನ್ನು ತಾಳಿ ಶ್ರೀಕೃಷ್ಣನನ್ನು ಸ್ತುತಿಸಿದರು. ಶ್ರೀ ಕೃಷ್ಣನಿಗೆ ದಾಮೋದರ ಎನ್ನುವ ಹೆಸರು ಸ್ಥಿರವಾಯಿತು.

### ೫.೩.೬ ಕನ್ನೆಪ್ಪುಂದಿಲ್ಲಂ ಗಾಂದ್ರ (ಕನ್ನೆಯನ್ನು ಒಪ್ಪಿಸಿ ಕೊಡುವುದು)

ಕರ್ಹಾಡರ ಬ್ರಾಹ್ಮ ವಿವಾಹ ಪದ್ಧತಿಯಲ್ಲಿ ಕನ್ನೆಯನ್ನು ವರನ ತಂದೆ ತಾಯಿಗಳಿಗೆ ಒಪ್ಪಿಸಿ ಕೊಡುವುದು (ಕನ್ನೆಪ್ಪುಂದೆವುಪ) ಒಂದು ವಿಧಿ. ಅವರ ಮಡಿಲಲ್ಲಿ ಕನ್ನಿಕೆಯನ್ನು ಕುಳ್ಳಿರಿಸಿ ಪೂರ್ಣ ವರ್ಷಾತ್ತಿಯಂ ಕನ್ಯಾ ಪುತ್ರವತ್ ಪಾಲಿತಾ ಮಯಾ। ಇದಾನೀಂ ತವ ಪುತ್ರಾಯ ದತ್ತಾ ಸ್ನೇಹೇನ ಪಾಲ್ಯತಾಂ ॥ ಎಂದು ಪ್ರಾರ್ಥಿಸುವುದನ್ನೇ ಮುಖ್ಯ ಕಥಾ ವಸ್ತುವನ್ನಾಗಿಸಿದ ಹಾಡು ಇದು. ಎಂಟು ಪದ್ಯಗಳಿವೆ.

ಮಗಳನ್ನು ಒಪ್ಪಿಸುವ ಸನ್ನಿವೇಶ ಇಲ್ಲಿ ಭಾವ ಪೂರ್ಣವಾಗಿ ಬಂದಿದೆ. ನಮ್ಮ ಮಗಳು ಹೆಚ್ಚು ತಿಳಿಯದ ಮುಗ್ಧೆ. ಆದರೆ ಉತ್ತಮ ಗುಣದವಳು. ಅವಳನ್ನು ನೀವು ಕೊಂಡು ಹೋಗಿ, ನಿಮ್ಮ ಮನೆಗೆ ಕೀರ್ತಿ ತರುವಂತೆ ಮಾಡಬೇಕು.

"ಅವುಂಥ್ಯಾ ಘರಾಮುಳ್ಯಾ ಆಜಣಾಂತುಲ್ಯಾ । ಎಕ್ಕ । ಮಾಡ್ಡ್ಯಾರಿ ದಾಲ್ಲಂ ಫೂಲ । ಫುಲ್ಲತಣ ತೇಂ। ವೈಂಟೀನ್ನು ತುಂಚಾ ದೇರ್ಲಂ । ಯಾ ಚೆಡ್ವಾಕ । ಸ್ವೀಕಾರು ಕರ್ನು ತುಮ್ಮಿ ॥ ದಯದೇರ್ನು ಹೋಡಿ ॥ ಪ್ರೀತಿ ಪೂರ್ವಕ ಎಕ್ಕ ಹಾರ್ನು ವಿ । ಖ್ಯಾತಿ ತುಂಥ್ಯಾ ಘರಾಕ ಯೆವೈಸಂ। ಹಾತು ಧರ್ನು ಹಾರುಂಚಿ ವ್ಹಳ್ಳಲಂ । ಯಾ ಥರಾ ಉಲ್ಲಣೆಂ ಯೆಂ ಅವುಂಥಲಂ॥ ॥ ವಾಣ ಕಶ್ಯಂಯಿಲೆ ಸಾಂಗ್ಯಾಕಣ್ಣಾ ॥"

ಮಗಳ ಗುಣವು ಎಲ್ಲರೂ ಮೆಚ್ಚುವಂತಹದು. ಎಲ್ಲರಿಗೆ ಬೇಕಾದಂತೆ ನಡೆಯುವ ಸ್ವಭಾವ ಇವಳದು. ಅವಳ ಸ್ವಭಾವದ ವರ್ಣನೆ ಇದಾಗಿದೆ.

"ತಪ್ಪು ಒಪ್ಪುಣೆ ಮೋಸು ವಂಚನ । ಕೇಡ ಮತ್ಸರ ನಾಸಂ ಖೆದ್ಧಳಿಂ ॥ ಹಾಕ್ಕಡಾಂಚಾ ಮನಾಕ ಸಮದೌಂ । ವರ್ತಿಪುಂತ್ಸೊ ಸ್ವಭಾವೊ ಎತ್ಥಲೊ ॥

ತವರನ್ನು ಬೆಳಗಿಸಿದ ಮಗಳು ಕೊಟ್ಟ ಮನೆಯನ್ನು ನಂದಾದೀಪವಾಗಿಸಬೇಕೆಂಬ ಹಂಬಲ ಹೆತ್ತವರದು.

ಅವುಂಥ್ಯಾ ಘರಾಮುಳ್ಯೊ ಓ ಏಕು ದಿವೊ ಅತ್ತಂ। ತುಂಥ್ಯಾ ಘರಾಣೆ ಹಾರ್ನು । ದೇರುಂತ್ಸೋಣು । ಅವುಂಥಿಲಿ ಈ ಪ್ರಾರ್ಥನ । ಮನ್ನಿಪುಂ ದೆವುಂಚಿ ।

ನಮ್ಮ ಮನೆಯ ಈ ದೀಪವನ್ನು ನಿಮ್ಮ ಮನೆಯಲ್ಲಿ ಕೊಂಡು ಹೋಗಿ ಇಡಬೇಕು. ಇಲ್ಲಿ ದೀಪವೇ ಮಗಳೆನ್ನುವ ರೂಪಕ ಮನೋಜ್ಞವಾಗಿದೆ. ಎಲ್ಲವನ್ನೂ ತಿಳಿದವರು ನೀವು. ಹೇಳುವಂಥದ್ದೇನೂ ಇಲ್ಲ. ಎಲ್ಲ ಬ್ರಹ್ಮಲಿಪಿಯಂತಾಗುತ್ತದೆ.

ನಮ್ಮ ಮನೆಯನ್ನೇ ಬೆಳಗಿಸಿದ ದೀಪ, ನಿಮ್ಮ ಮನೆಯನ್ನು ಬೆಳಗಿಸಲಿ ಎನ್ನುವ ಉದಾತ್ತ ಭಾವದೊಡನೆ ತನ್ನ ಮನೆಯಿಂದ ದೀಪ ಹೋದಾಗ ಕತ್ತಲೆ ವ್ಯಾಪಿಸುವುದು ಸ್ವಾಭಾವಿಕ. ಕನ್ನೆಯನ್ನು ಕಳುಹಿಸಿಕೊಟ್ಟಾಗ ಮನೆ ಮನಗಳೆರಡೂ ಶೋಕಾಂಧಕಾರದಲ್ಲಿ ಮುಳುಗುತ್ತವೆ.

ಮಗಳ ದೋಷವನ್ನು ಸುಂದರ ಉಪಮೆಗಳಿಂದ ಹೆಣೆದಿದ್ದಾರೆ. "ಒತ್ತಾನ್ನು ಫುಲ್ಲಾಂಚಿ ವಾಲಿ ಬಾಡ್ಪಲ್ಲಸಂ " ಬಿಸಿಲಲ್ಲಿ ಹೂವಿನ ಬಳ್ಳಿ ಬಾಡಿದಂತೆ "ಹತ್ತಾರಿ ರೂಂ ದಾಲ್ಲಸಂ" ಕೈಯಲ್ಲಿ ಹುಣ್ಣಾದಂತೆ ಹೆದರುವ ದೋಷ ಮಗಳದು. ದ್ರೌಪದಿ, ಅರುಂಧತಿಯರಂತೆ ಮಹಾ ಪತಿವ್ರತೆ ಇವಳೂ ಆಗುವಂತೆ ತಿಳಿಯ ಹೇಳಬೇಕು.

ವರನ ಮಾತಪಿತರಲ್ಲಿ ಪ್ರಾರ್ಥಿಸಿದ ಮೇಲೆ

"ಯೆಗಡೇಕ ಕಾನದೆವುಂ ಐಕ್ಕಮ್ಮ ತುಜ್ಜಣಿ । ಸಾಂಗ್ಯಾಕ ಏಕಅತ್ಸ । ಸಾಂಗುಂತ್ಸೊಲೋ। ಸಮಯ ಅತ್ತುಂಚಿ ಐತ್ಸ । ಸಾಂಗುಂನ್ನಲಂ । ಕರ್ತವ್ಯ ಅವುಂಜ ಅತ್ಸ । ಸಮದೌನು ಐಕ್ಕ ॥"

ಮಗಳಲ್ಲಿ ಹೇಳುವ ಈ ಪದ್ಯ ಸುಂದರವಾಗಿ ಮೂಡಿ ಬಂದಿದೆ.

ಪತಿಗೃಹಕ್ಕೆ ಹೊರಟ ಶಕುಂತಲೆಗೆ ಕಣ್ವರು ಕೊಡುವ ಉಪದೇಶದಂತೆ ಇಲ್ಲಿಯೂ ಯೋಗ್ಯ ಮಾತನ್ನು ದು:ಖ ಮಿಶ್ರಿತ ಹೃದಯ ಭಾರದಿಂದ ಹೇಳುವ ಪದ್ಯ ಕರುಣರಸಭರಿತವಾಗಿದೆ.

ಕೊನೆಗೆ ನಮ್ಮ ಮನೆಯ ಹೆಸರು ಉಳಿವಂತೆ ಪ್ರೀತಿ ಪೂರ್ವಕ ಸೇವಾ ಕಾರ್ಯವನ್ನು ಮಗಳಿಗೆ ಹೇಳಿ ಮಾಡಿಸಬೇಕೆನ್ನುವ ಪ್ರಾರ್ಥನೆಯೊಂದಿಗೆ ಪದ್ಯ ಕೊನೆಗೊಳ್ಳುತ್ತದೆ. ಅಲ್ಲಲ್ಲಿ ಪ್ರಯೋಗಿಸಿದ ಪದ ಪುಂಜಗಳು ಅರ್ಥವತ್ತಾಗಿವೆ. ರಸಾನುಗುಣ ಭಾವ ಪೂರ್ಣತೆಯಿಂದ ಕೂಡಿದ ಪದ್ಯವಿದು ಹೃದ್ಯವಾಗಿದೆ. ಈ ಹಾಡನ್ನು ಓದಿದಾಗ 'ಎಮ್ಮ ಮನೆಯಂಗಳದಿ ಬೆಳೆದೊಂದು ಹೂವನ್ನು " ಎನ್ನುವ ವೀ.ಸಿ. ಯವರ ಪದ್ಯ ನೆನಪಾಗುತ್ತದೆ.

೫.೪. ನಾಟಕ

ನಾಟಕದಲ್ಲಿ ನಟನೆಗೆ ಪ್ರಾಧಾನ್ಯ. ಪಾತ್ರ ಯಾವುದಾದರೂ ನಟನಲ್ಲಿ ಪ್ರೌಢತೆ ಇದ್ದರೆ ಆತ ಪಾತ್ರಕ್ಕೆ ಜೀವ ತುಂಬುತ್ತಾನೆ. ತನ್ನ ಅಭಿನಯದಿಂದಲೇ ಪ್ರೇಕ್ಷಕರ ಮನ ಗೆಲ್ಲುತ್ತಾನೆ. ರಂಗ ಪ್ರಯೋಗದ ಮೂಲಕ ಅದು ಯಶಸ್ವೀ ನಾಟಕವಾಗಿ ಜನ ಮನದ ಮೆಚ್ಚುಗೆಗೆ ಪಾತ್ರವಾಗುತ್ತದೆ.

೫.೪.೧ ರುಪಯ್ಯಾಂ ಹಾರ್ಡಿ (ಹಣದ ಮದುವೆ): ಕರ್ಹಾಡ ಸಮಾಜದ ಅಪೇಕ್ಷೆಯ ಮೇರೆಗೆ ಪೆರ್ಲಕೃಷ್ಣ ಭಟ್ಟರು ರಚಿಸಿದ ಕಿರುನಾಟಕ ರುಪಯ್ಯಾಂ ಹಾರ್ಡಿ. ಈಗಾಗಲೇ ರಂಗ ಪ್ರಯೋಗವನ್ನು ಯಶಸ್ವಿಯಾಗಿ ಪೂರೈಸಿ ಪ್ರೇಕ್ಷಕರಿಂದ ಮೆಚ್ಚುಗೆಯನ್ನು ಪಡೆದಿದೆ.

ರುಪಯ್ಯಾಂ ಹಾರ್ಡಿ ಎಂದರೆ ಹಣದ ಮದುವೆ ಎಂದರ್ಥ. ಈ ನಾಟಕದಲ್ಲಿ ನಾಲ್ಕು ದೃಶ್ಯಗಳಿದ್ದು, ಒಟ್ಟು ಒಂಬತ್ತು ಪಾತ್ರಗಳಿವೆ. ವಧುವಿನ ತಂದೆ ಅಪ್ಪಣ್ಣ, ಊರಿನ ಗುರಿಕಾರ ಹಾಗೂ ವರನ ತಂದೆ ಅಪ್ಪಯಾಮು, ಪುರೋಹಿತ ವೆಂಕಟಭಾವೋ, ಮದುಮಗ ನಾರಾಯಣ, ವರನ ತಾಯಿ ಯಮುನೆ, ವಧುವಿನ ಸಹೋದರ ಅಪ್ಪಚ್ಚು ಸುಶಿಕ್ಷಿತ ವಧು ಶಾರದೆ, ವಧುವಿನ ತಾಯಿ ಗಂಗಮ್ಮ.

ಬಡತನದ ಬೇಗೆಯಲ್ಲಿದ್ದ ಅಪ್ಪಣ್ಣ ತನ್ನ ಪ್ರಾಯ ಪ್ರಬುದ್ಧೆಯಾದ ಮಗಳ ವಿವಾಹವಾಗಲು ಒದ್ದಾಟ ನಡೆಸುತ್ತಾನೆ. ವೆಂಕಟುಭಾವೋ (ಪುರೋಹಿತ ಹಾಗೂ ದಲ್ಲಾಳಿ) ಎಂಬವನು ಅಪ್ಪಯಾಮುವಿನ ಮಗ ನಾರಾಯಣನು ಶಾರದೆಯನ್ನು ಮದುವೆಯಾಗುವ ಹಾಗೆ ಮಾಡುತ್ತಾನೆ. ಇವನು ಶ್ರೀಮಂತ ಕುಳ. ಜೊತೆಗೆ ಮಹಾ ಜಿಪುಣ ವರದಕ್ಷಿಣೆಯಾಗಿ ಇಪ್ಪತ್ತು ಸಾವಿರ ರೂಪಾಯಿ ಹಾಗೂ ಐದು ಪವನು ಚಿನ್ನ ಕೊಡಬೆಕೆಂದು ತನ್ನ ಶ್ರೀಮಂತಿಕೆಗೆ ಅನುಗುಣವಾಗಿ ಮದುವೆಯನ್ನು ವಿಜೃಂಭಣೆಯಿಂದ ನಡೆಸಬೇಕೆಂದು ಮೊದಲೇ ಶರ್ತ ವಿಧಿಸುತ್ತಾನೆ. ಶಾರದೆಯ ತಂದೆ ಇದಕ್ಕೊಪ್ಪಿದರೂ ವರದಕ್ಷಿಣೆ ಹತ್ತು ಸಾವಿರ ಮಾತ್ರ ಕೊಡಲು ಸಮರ್ಥನಾಗುತ್ತಾನೆ. ಮದುವೆಯ ದಿನ ಕೊಡುತ್ತೇನೆಂದು ಹೇಳಿದರೂ ಆ ದಿನ ಕೊಡಲಾರದೆ ಕೈ ಚೆಲ್ಲುತ್ತಾನೆ ಕೈದಾರೆಗಾಗಿ ಹುಡುಗಿಯನ್ನು ತಂದು ನಿಲ್ಲಿಸಿದಾಗ ಹುಡುಗನ ತಂದೆ ಬಾಕಿಯಾದ ಹತ್ತು ಸಾವಿರ ಮತ್ತು ಚಿನ್ನ ಕೊಡದೆ ಮದುವೆಯಾಗಲು ಸಾಧ್ಯವಿಲ್ಲವೆಂದು ಹುಯಿಲೆಬ್ಬಿಸುತ್ತಾನೆ. ಪುರೋಹಿತ ವೆಂಕಟಭಟ್ಟರು ಗುರಿಕಾರರು ವಿನೀತರಾಗಿ ಎಷ್ಟು ಹೇಳಿದರೂ ಅಪ್ಪಯಾಮು ಒಪ್ಪುವುದಿಲ್ಲ. ಕನ್ಯಾಪಿತ ಅಪ್ಪಣ್ಣನ ದೀನತನದ ಯಾಚನೆಯನ್ನು ಗನಿಸುವುದಿಲ್ಲ.

ಈ ಸಂದರ್ಭದಲ್ಲಿ ಶಾರದೆ ಕ್ರೋಧಾವಿಷ್ಟೆಯಾಗಿ ವರನ ಪಿತನನ್ನು ಬೈದು, ಅಂತ:ಪಟವನ್ನು ಎಳೆದು ಬಿಸಾಡುತ್ತಾಳೆ. ಮದುವೆಯೇ ಬೇಡವೆಂದು ಹೇಳಿ ತಂದೆ ತಾಯಿಯೊಡನೆ ಮಂಟಪವನ್ನು ಬಿಟ್ಟು ಮನೆಯೊಳಗೆ ಹೋಗುತ್ತಾಳೆ. ಬಂದವರೆಲ್ಲ ಹೊರಟು ಹೋಗುತ್ತಾರೆ. ಅಪ್ಪಯಾಮುನ ಮುಖಕ್ಕೆ ಮಂಗಳಾರತಿ ಆಗುತ್ತದೆ. ಆತ ಹೆಂದತಿ ಮಗನೊಂದಿಗೆ, ತಲೆಗೆ ಕೈಯಿಟ್ಟುಕೊಂಡು ಇನ್ನು ಜೀವಂತ ಇರುವಷ್ಟು ಕಾಲ ಈ ದುಡ್ಡಿನ ಮೋಹ ಬೇಡ ಎಂದು ಹೇಳುತ್ತಾನೆ. ಮಗ 'ನಾವೇನು ಮಾಡುವುದು'' ಎಂದು ಕೇಳಿದಾಗ 'ಸಾವು ಒಂದೇ ನಮಗಿರುವ ದಾರಿ' ಎನ್ನುತ್ತಾನೆ. ಇಲ್ಲಿಗೆ ನಾಟ ಮುಕ್ತಾಯವಾಗುತ್ತದೆ.

ಇದು ಒಂದು ರೀತಿಯಲ್ಲಿ ದುರಂತ ನಾಟಕವೆಂದರೂ ತಪ್ಪಲ್ಲ. ಹಾಸ್ಯರಸ ಪೂರಿತ ನಾಟಕವಿದು. ಅದಕ್ಕೊಂದು ದೃಷ್ಟಾಂತ ಇಲ್ಲಿದೆ.

ಅಪ್ಪಚ್ಚು : ತುವೆಂ, ಭರ್ತಿದಣ ಮಾಮಣೆ ಒಟ್ಟು ಯೇರಿ ಮ್ಹಳ್ಳಂ?

(ನೀನು ತುಂಬ ಜನ ಮಾವಂದಿರೆಲ್ಲ ಬರ್ತಾರೆ ಎಂದಿ)

ಅಪ್ಪಣ್ಣ: ಹೋಯೆ ಮಾಮಯೇರಿ. ವರ್ಷಿಕಾಕ ನೋಯೆ, ಹಾರ್ಡಿಕೇಕ

(ಹೌದು ಮಾವಂದಿರು ಬರ್ತಾರೆ. ಶ್ರಾರ್ಧಕ್ಕಲ್ಲ, ಮದುವೆಗೆ)

ಅಪ್ಪಚ್ಚು: ಕೊಣಾಕಪ್ಪ ಹಾರ್ಡಿ? ತುಕ್ಕಾಕೀ? ಅಮ್ಮಾಂಕ ?

ಕರ್ವಾಡ ಸಮಾಜದಲ್ಲಿ ಇತ್ತೀಚೆಗಿನ ವರದಕ್ಷಿಣೆ ಪಿಡುಗನ್ನು ಹೇಗೆ ನಿವಾರಿಸಬಹುದೆನ್ನುವತ್ತ ನಾಟಕ ''ಕ್ಷ-ಕಿರಣ' ಬೀರುತ್ತದೆ. ಕರ್ವಾಡರ ಹಲವು ರೀತಿ ರಿವಾಜಿನ ಚಿತ್ರ ಸುಂದರವಾಗಿ ಮೂಡಿ ಬಂದಿದೆ. ''ಚೆಡಾಂಕ ವಿದ್ಯಾಭ್ಯಾಸುನತ್ಥಿಲ್ಲೇ ಇತ್ತಂ ತೋಚೇಡು ಹೋಯೆ ಕಣೆ. ತಿತ್ತುಚ್ಚಿಲ್ಲೆ ಫುರೊ'' ಹುಡುಗನಿಗೆ ವಿದ್ಯಾಭ್ಯಾಸವಿಲ್ಲದಿದ್ದರೇನು? ಅವನು ಗಂಡಸಲ್ವೇ ಅಷ್ಟಿದ್ದರೆ ಸಾಕು. ಕಾಲ ಬದಲಾದರೂ ಹುಡುಗನ ಹಾಗೂ ಅವನ ತಂದೆ ತಾಯಿಯ ಮನೋಭಾವ ಬದಲಾಗಲಿಲ್ಲ. ಆದರೆ ಹುಡುಗಿ ರೂಪವತಿ, ವಿದ್ಯಾವತಿ, ಉದ್ಯೋಗದಲ್ಲಿದ್ದವಳಾಗಬೇಕು. ಇದು ಇಂದಿನವರ ಅಭಿಪ್ರಾಯ.

''ಘರಾಸುತ್ತ ಉಜ್ಜೋ ಪಳ್ಯಾಮಾಣ ಕಳ್ಳೆ ಇತ್ತಂ'' ಮನೆ ಸುತ್ತ ಬೆಂಕಿ ಬಿದ್ದ ಮೇಲೆ ತಿಳಿದರೇನು? ಇಂತಹ ಗಾದೆ ಮತುಗಳು ಅಲ್ಲಲ್ಲಿ ಬಂದಿವೆ. ಅಪ್ಪಚ್ಚು, ಅಪ್ಪಣ್ಣರ, ಅಪ್ಪಚ್ಚು, ವೆಂಕಣ್ಣನ ಸಂವಾದ ಹಾಸ್ಯರಸಾಯನವಾಗಿದೆ.

ಅಪ್ಪಚ್ಚು: ನನ್ನ ಶಾಲೆಯಲ್ಲಿ ನಾನೇ ಫಸ್ಟ್

ವೆಂಕಣ್ಣ: ಶಿಕ್ಕುಂಚಲಾಂನುಂಕಿ ? ಖವುಂಚಲಾಂನು?

(ಕಲಿಯುವುದರಲ್ಲಿಯೋ? ತಿನ್ನುವುದರಲ್ಲಿಯೋ)

ಅಪ್ಪಚ್ಚು: ಶಾಲೇಂನು ಖಾಯಾ ಕಶ್ಶಮ್ಮೇಡ್ರ? ದಾಯೆಸಾ ಮಾಸ್ಟ್ರಾಂಥೆ ಪೆಟ್ಟ ಖವ್ವೇದಿ (ಶಾಲೆಯಲ್ಲಿ ತಿನ್ನಲು ಏನು ಸಿಕ್ಕುತ್ತದೆ? ಬೇಕಿದ್ದರೆ ಮಾಸ್ಟ್ರ ಪೆಟ್ಟು ತಿನ್ನಬಹುದು).

ವರದಕ್ಷಿಣೆಯ ಬಗ್ಗೆ ಶಾರದೆಯ ನಿಲುವು ಮೆಚ್ಚುವಂತಹದಾಗಿದೆ. ಶಾರದೆಯು "ವಿವಾಹ ಮಂಗಲ ಕಾರ್ಯವು, ಚೆಡೀ ಚೆಡ್ವಾಂಕ ಬಲಿದೆವುನು ಪೈಶೆ ಕರುಂತ್ಲೋ ಓ ಕುತ್ಸಲ್ಲೋ ವ್ಯವಹಾರು ಖಂಚ ಶಾಸ್ತ್ರನ್ನು ಅತ್ಸ? ವಿವಾಹ ಮಂಗಲ ಕಾರ್ಯವಂತೆ. ಹೆಣ್ಣು ಮಕ್ಕಳನ್ನು ಬಲಿಕೊಟ್ಟು ಹಣಮಾಡುವ ಈ ಕೆಟ್ಟ ವ್ಯವಹಾರ ಯಾವ ಶಾಸ್ತ್ರದಲ್ಲಿದೆ? ಹಾಗೆಯೇ ಮಜ್ಜೆ ಕಣ್ಯೇಚಿ ಚೆಡೀನಿ ಒಟ್ಟು ಧೈರ್ಯೇನ ರಾಬ್ಬಿಲ್ಲೇರಿ, ಓ ಕಳ್ಳ ವ್ಯಾಪಾರು ತನ್ನಾರ ರಬ್ಬರಕಿ ನಾ ಪಾಳ್ಯಂ. ನನ್ನ ಹಾಗೆ ಎಲ್ಲಾ ಹುಡುಗಿಯರು ಧೈರ್ಯವಾಗಿ ನಿಂತರೆ ಈ ಕಳ್ಳ ವ್ಯಾಪಾರ ತನ್ನಷ್ಟಕ್ಕೆ ನಿಲ್ಲುತ್ತದೋ ಇಲ್ಲವೋ ನೋಡುವ ಹೀಗಾದರೆ ವರದಕ್ಷಿಣೆ ತನ್ನಿಂತಾನೇ ನಿಲ್ಲದೆ ಎಲ್ಲಿ ಹೋದೀತು? ಚಿಕ್ಕದಾದರೆ ಚೊಕ್ಕ ನಾಟಕವಿದು.

ವರದಕ್ಷಿಣೆಯೆನ್ನುವುದು ಸಮಾಜವನ್ನು ನಾಶದಂಚಿಗೆ ತಳ್ಳುತ್ತದೆ. ಅದಕ್ಕೆ ನಿದರ್ಶನ ಈ ನಾಟಕ. ಸಮಾಜದಲ್ಲಿ ಶ್ರಿಮಂತಿಕೆ ಮುಖ್ಯವಲ್ಲ, ಆದರ್ಶ ಗುಣಗಳು, ಔದಾರ್ಯ, ಸಹಬಾಳ್ವೆ ಮುಖ್ಯವಾಗಿ ಬೇಕಾಗಿದೆ.

ಇಂದಿನ ಆಧುನಿಕ ಯುಗದಲ್ಲಿ ವಿದ್ಯಾವಂತರೂ, ಬುದ್ಧಿವಂತರು ಇದ್ದರೂ ವರದಕ್ಷಿಣೆಯ ಪಿಡುಗಿನಿಂದಲಾಗಿ ಮಾನವಕುಲ ತತ್ತರಿಸುವಂತಗಿದೆ. ಈ ಅನಿಷ್ಟ ಪದ್ಧತಿ ದೂರವಾಗಿ ವಿವಾರ ಸಂಬಂಧಗಳು ಬಾಂಧವ್ಯದ ಬೆಸುಗೆಯಾಗಬೇಕು. ವಿವಾಹಗಳು ಸರಳ ರೀತಿಯಲ್ಲಿರಬೇಕು. ಇದರಿಂದ ಸಮಾಜಕ್ಕೆ ಒಳಿತು.

ಪೆರ್ಲ ಕೃಷ್ಣ ಭಟ್ಟರು ಬರೆದ ಈ ನಾಟಕದಲ್ಲಿ ವರದಕ್ಷಿಣೆಯನ್ನು ಪಡೆದ ಅವಿದ್ಯಾವಂತ ಗಂಡನನ್ನು ಅಧ್ಯಾಪಿಕೆಯಾಗಿ ಸ್ವಾವಲಂಬಿಯಾದ ವಿದ್ಯಾವಂತ ಹೆಣ್ಣು ಮದುವೆಯಾಗದೆ ತಿರಸ್ಕರಿಸಿ ಮದುವೆ ನಿಲ್ಲಿಸುವ ಆಧುನಿಕ ದೃಷ್ಟಿಕೋನವನ್ನು ವಿಡಂಬನಾತ್ಮಕವಾಗಿ ಚಿತ್ರಿಸಿದ್ದಾರೆ.

ವರದಕ್ಷಿಣೆ ಸಮಸ್ಯೆ ನಿವಾರಿಸುವಲ್ಲಿ ಆರ್ಥಿಕವಾಗಿ ಮುಂದುವರಿದ ಸ್ವಾಲಂಬಿ ವಿದ್ಯಾವಂತ ಹೆಣ್ಣಿನ ಪಾತ್ರ ಮಹತ್ವದ್ದಾಗಿದೆ. ಆಕೆ ತನ್ನ ನಿಲುವನ್ನು ಧೈರ್ಯದಿಂದ ತಿಳಿಸಿದಾಗ ಸಮಸ್ಯೆಗಳಿಗೆ ಪರಿಹಾರ ದೊರೆಯುತ್ತದೆ. ಸಮಾನತೆ ಉಂಟಾಗುತ್ತದೆ. ಬದುಕಿನ ಸರ್ವಾಂಗೀಣ ಪ್ರಗತಿ ಸಾಧ್ಯವಾಗುತ್ತದೆ ಎನ್ನುವ ಆಶಯ ಇಲ್ಲಿದೆ.

೫.೪.೨ ಬಾಡ್ನುನು ಪುಲ್ಲಲ್ಲಂ ಫೂಲ (ಬಾಡಿ ಅರಳಿದ ಹೂ) : ಶ್ರೀ ಸುರೇಶ ಶಿರಂತಡ್ಕ ಇವರ ಅಪ್ರಕಟಿತ ನಾಟಕ 'ಬಾಡ್ನುನು ಪುಲ್ಲಲ್ಲಂ ಫೂಲ' ಬಾಡಿ ಅರಳಿದ ಹೂ ಇದಲ್ಲದೆ ಅಹಲ್ಯೆ, ಉದ್ಧಾಡು, ಹಾರ್ದಿ . . . . ಹಾರ್ದಿ... ಮಮ್ಮಾಹಾರ್ದಿ, ಮೊದಲಾದ ನಾಟಕಗಳಲ್ಲದೆ ಗಂಗಾವತಾರು ಎಂಬ ಕರ್ಾಡ ಯಕ್ಷಗಾನವೊಂದನ್ನು ಇವರು ಬರೆದಿದ್ದಾರೆ. ಇವರ ಯಾವ ಕೃತಿಯೂ ಮುದ್ರಣ ಕಂಡಿಲ್ಲ. ಎಲ್ಲ ಹಸ್ತಪ್ರತಿಗಳಲ್ಲಿಯೇ ಇದೆ.

'ಬಾಡ್ನುನು ಪುಲ್ಲಲ್ಲಂ ಫೂಲ' ಈ ನಾಟಕವು ರಂಗ ಪ್ರದರ್ಶನವನ್ನು ಕಂಡ ಒಂದು ಯಶಸ್ವಿ ಪ್ರಯೋಗ. ಇದರಲ್ಲಿ ಹತ್ತು ಪಾತ್ರಗಳು. ಹನ್ನೆರಡು ದೃಶ್ಯಗಳು, ಎಡೆ ಎಡೆಯಲ್ಲಿ ಪದ್ಯಗಳೂ ಸ್ಥಾನ ಪಡೆದಿವೆ.

ಪುರಂದರರಾಯರು, ಇವರ ಪತ್ನಿ ತುಂಗ, ಮಗ ಆದಿತ್ಯ, ಕೆಲಸದವ ಮಾಡು (ಕಥಾನಾಯಕ) ಆದರೆ ಇವನು ಪುರಂದರರಾಯರಿಂದ ಅವಿವಾಹಿತ ಹೆಣ್ಣಿನಲ್ಲಿ ಹುಟ್ಟಿದವ, ವಿಷಕಂಠ (ಖಳನಾಯಕ) ಪ್ರಣಮ್ಯ ವಿಷಕಂಠನ ಪ್ರೇಯಸಿ, ಕುಟ್ಯಣ್ಣ ಊರ ಗೃಹಸ್ಥ, ಅವನ ಮಗಳು ಕುಮುದ, ಶಂಭಯ್ಯ ಹೋಳಿಗೆ ಭಟ್ಟ ಹಾಗೂ ಪೋಲಿಸಿನವರು ಇಲ್ಲಿಯ ಪಾತ್ರಗಳು.

ತನಗೆ ಹೆಣ್ಣು ಕೊಡಲಿಲ್ಲವೆಂಬ, ಅಕ್ಕ ಭಾವನ ಮೇಲಿನ ದ್ವೇಷದಿಂದ ಕೆಟ್ಟವನಾದ ವಿಷಕಂಠ ಪುರಂದರರಾಯರ ವಿಧುರ ಮಗ ಆದಿತ್ಯನಿಗೆ ಪ್ರಣಮ್ಯೆಯನ್ನು ಮದುವೆ ಮಾಡಿಸಿ ಅವಳ ಮೂಲಕ ಆದಿತ್ಯನನ್ನು ಕೊಲ್ಲಿಸಿ ರಾಯರ ಸಂಪತ್ತೆಲ್ಲಾ ಕೈಗೆ ಬಂದೊಡನೆ ಪ್ರಣಮ್ಯೆಯನ್ನು ಕೈ ಬಿಡುತ್ತಾನೆ. ಅವಳನ್ನು ತಾನೇ ಮದುವೆಯಾಗುತ್ತೇನೆಂದು ಭಾಷೆ ಕೊಟ್ಟಿದ್ದ. ಗಂಡನನ್ನು ಕೊಂದು ಮನೆಯನ್ನು ಬಿಟ್ಟ, ಪ್ರಣಮ್ಯಳನ್ನು ತ್ರಿಕರಣ ಪೂರ್ವಕ ನಂಬಿದವನೇ ಕೈಕೊಟ್ಟ. ಅವಳೀಗ ಬಾಡಿದ ಹೂ.

ಆದರೆ ಮಾದುವಿನ ದೂರದರ್ಶಿತ್ವ ಮತ್ತು ವಿಚಕ್ಷಣ ಬುದ್ಧಿಯಿಂದಾಗಿ ವಿಷಕಂಠ ಸಕಾಲದಲ್ಲಿ ಪೋಲಿಸರ ವಶವಾಗಿ ಸತ್ಯ ಸಂಗತಿ ತಿಳಿಸುತ್ತಾನೆ. ಪುರಂದರರಾಯರ ಅಭಿಮತದಂತೆ ಪ್ರಣಮ್ಯ ಮಾದುವಿನ ಕೈ ಹಿಡಿದು ರಾಯರ ಆಸ್ತಿ ಸಂಪತ್ತಿನ ಉತ್ತರಾಧಿಕಾರಿಣಿಯಾಗಿ ನಾಟಕ ಸುಖಾಂತವಾಗುತ್ತದೆ. ಬಾಡಿದ ಹೂ ಮತ್ತೆ ಅರಳುತ್ತದೆ. ಕುಟ್ಯಣ್ಣನ ಅವಿವಾಹಿತೆಯಾದ ಮಗಳು ಕುಮುದೆಯನ್ನು ಶಂಭಯ್ಯನಿಗೆ ಮದುವೆ ಮಾಡಲು ಪ್ರಯತ್ನಿಸಿ ಕೊನೆಗೆ ಆ ಕಾರ್ಯವೂ ಕೈಗೊಡುತ್ತದೆ. ಶಂಭಯ್ಯ ಕುಮುದೆಯನ್ನು ಮದುವೆಯಾಗುತ್ತಾನೆ. ನಾಟಕ ಹಾಸ್ಯ ರಸ ಪ್ರಧಾನವಾಗಿದೆ. ವಿಭಿನ್ನ ಪಾತ್ರಗಳ ಚಿತ್ರಣ, ಹಾಸ್ಯಭರಿತ ಸಂವಾದ, ಕಥಾನಕದ ಹಂದರ ಚೆನ್ನಾಗಿ ಮೂಡಿ ಬಂದಿದೆ. ನಾಟಕೀಯತೆ ಎದ್ದು ಕಾಣುತ್ತದೆ.

೫. ೪. ೩ ಪಂಚವಟಿ

ಸ್ಪೈಪಂಗಲ್ಲು ಹೊಸಮನೆ ಶ್ರೀ ವಾಸುದೇವ ಭಟ್ಟರು ಬರೆದ "ಪಂಚವಟಿ" ಖರಾಸುರವಧೆ ಯಕ್ಷಗಾನಪ್ರಸಂಗದಿಂದ ಆಯ್ದ ಕೆಲವು ಪದ್ಯಗಳಿವೆ. ಸೌರಾಷ್ಟ್ರರಾಗ ತ್ರಿಪುಡೆತಾಳದ ಮೂರು ಪದ್ಯಗಳು, ವಾರ್ಧಿಕ, ಭಾಮಿನಿ ಒಂದೊಂದು, ದ್ವಿಪದಿ ಹೀಗೆ ಒಟ್ಟು ಒಂಬತ್ತು ಪದ್ಯಗಳು ಇಲ್ಲಿವೆ. ಪಾರ್ತಿಸುಬ್ಬನ ಪಂಚವಟಿಯ ಭಾವಾನುವಾದ ಮಾಡುವುದರಲ್ಲಿ ಸಫಲರಾಗಿದ್ದಾರೆ.

ವಾರ್ಧಕ ಷಟ್ಪದಿ :-

"ಭಾರಿ ಆರ್ಭಟ ರಕ್ಕ ಸಾಂಥಿ ಐಕ್ಕುನು ರಾಮ । ದೂರಿಟುಂ ಪಳ್ಯೊಜಣ್ಣು ಬಿಲ್ ಬಾಣ ಧರ್ಜಣ್ಣು। ಭೀರ ತೂಂ ಭಿತರಿ ವತ್ಸಣು ಜಾನಕಿತಂ ಸಂಗುಂ ರಾಮ ತೋ ಮುಂದರ್ಸಲೊ ॥ ಭಾರಿ ರಕ್ಕಸಕೂಟ ಕೂಣ್ಜಣ್ಣು ಶೂರ್ಪನಖಿ। ಘೋರ ರಾನ್ಪಾಂತು ತ್ಸೊಂಕುನು ಐಲಿ ಕಸಂ ಮ್ಹಳ್ಳೆ ॥ ೧ ॥ ಮಾರಿ ಭೀಕರ ರೂಪ ಸ್ವರ್ಗುಕಂಪನ ದೌಂಚ ಥರೆಂ ಐಲಿಕುಲಕಂಟಕಿ"

ರಾಕ್ಷಸರ ಭಯಂಕರವಾದ ಆರ್ಭಟವನ್ನು ಕೇಳಿ ರಾಮನು ದೂರದಿಂದಲೇ ನೋಡಿ ಬಿಲ್ಲುಬಾಣಗಳನ್ನು ಹಿಡಿದು ಪತ್ನಿಯಾದ ಜಾನಕಿಯೊಡನೆ "ನೀನು ಹೆದರುವಿ ಒಳಗೆ ಹೋಗು" ಎಂದು ಹೇಳಿ ರಾಮನು ಹೊರ ಹೊರಟನು. ರಾಕ್ಷಸರನ್ನೆಲ್ಲ ಕೂಡಿಕೊಂಡು ಶೂರ್ಪನಖಿಯು ಘೋರ ಅಡವಿಯಲ್ಲಿ ನಡೆದುಕೊಂಡು ಮಾರಿ ಭೀಕರ ರೂಪ ಧರಿಸಿ ಸ್ವರ್ಗ ಕಂಪಿಸುವ ರೀತಿಯಲ್ಲಿ ಆ ಕುಲಕಂಟಕಿ ಬಂದಳು.

ಇದು ವಾರ್ಧಕ ಷಟ್ಪದಿಯಲ್ಲಿದ್ದು ಪೂರ್ವಾರ್ಧ ಉತ್ತರಾರ್ಧಕ್ಕೆ ಸಮವಾಗಿದೆ.

ಭಾಮಿನಿ ಷಟ್ಪದಿ

ತ್ರಿಶಿರು ಮೆಲ್ಲಿಲಿ ವಾರ್ತೆ ಐಕ್ಕುನು । ಅಸುರು ಖರು ಬಹು ಉಗ್ರ ದೌಜಣ್ಣು। ಅಸಮಬಲ ದನುಜಾಂಥ್ಯ ಕೂಟೇನ ಐಲೊ ತೋ ಫುಳ್ಳೇ॥ ಮಿಸುಕು ಪ್ಯಾಕಣೆ ಸೊಣ್ಣ ರಾಮಕ । ಕಸಂ ದಾಲ್ಲೇರಿಲೆ ತಾಜ್ಜಾ ಭೌವಾಕ । ಪಿಸುಣ್ಣು ಸೀತೇಕ ಹಾವಂ ಒಡ್ಡಿರಂ ಕೋಣ ಅಡ್ದೌನ್ನಂ ॥೧॥

ಶೂರ್ಪನಖಿಯ ಮರಣವಾರ್ತೆಯನ್ನು ಕೇಳಿ ಅಸುರನಾದ ಖರನು ಕೋಪೋದ್ರೇಕದಿಂದ ರಾಕ್ಷಸಸೇನಾ ಬಲದೊಂದಿಗೆ ಮುಂಚೂಣಿಯಲ್ಲಿದ್ದು ಬಂದು. ರಾಮನನ್ನು ಮಿಸುಕಾಡುವುದಕ್ಕೂ ಬಿಡದೆ ಖರನು ಹೇಗಾದರೂ ಮಾಡಿ ಅವನ ತಮ್ಮನನ್ನು ಸೀಳಿ ಸೀತೆಯನ್ನು ಎಳೆದು ತರುತ್ತೇನೆ. ತಡಿಯುವವರು ಯಾರು? ಎಂದು ಗರ್ಜಿಸಿದನು.

ಭಾಮಿನಿ ಷಟ್ಪದಿ ಇದಾಗಿದೆ. ಇದರಲ್ಲಿ ಒಂದು ಎರಡು ನಾಲ್ಕು ಐದನೆಯ ಪಾದಗಳಲ್ಲಿ ಮೂರು ನಾಲ್ಕರ ನಾಲ್ಕು ಗಣಗಳೂ ಮೂರು ಆರರಲ್ಲಿ ಮೂರು ನಾಲ್ಕರ ಆರು ಗಣಗಳೂ, ಗುರುವೂ ಇದೆ. ಮೂರು ಆರನೆ ಪಾದದ ಅಂತ್ಯ ಲಘು ಗುರುವಾಗುತ್ತದೆ.

ದ್ವಿಪದಿ

"ಅಸಂ ಮನಾಂ ಕರ್ಜಣ್ಣು ಅತಿಗುಪ್ತದೌನು। ತಸಂ ಥೈಂಟುಂ ರಾಕ್ಷಸಿನೆ ರೂಪ ಮಾಜಿಪುನು ॥೧॥ ಸೋಳ ವರ್ಸಾಂ ಚೇಡಿ ತೀ ಮಾಣದೌನು। ಜಾಲ ವಿದ್ಯೆನೆ ಫುಳ್ಳೆಂ ಶೃಂಗಾರು ಕರ್ನು ॥೨॥ ಫುಲ್ಲಬಾಣಾ ಬ್ಯಾಲ ತೀ ದೌನು ಮಾಣ । ಫುಳ್ಳೆಂ ರಾಮಾ ಅಶಿಕ ಐಲಿ ತೀ ಜಾಣ ॥೩॥"

ಹದಿನಾರು ವರ್ಷದ ಕನ್ನೆಯಾಗಿ ಶೂರ್ಪನಖಿಯು ರಾಮನ ಸಮೀಪಕ್ಕೆ ಬಂದ ವಿಷಯ ಇಲ್ಲಿದೆ.

೫. ೪. ೪ ಚುಟುಕು

ಚುಟುಕು ಹೊಸಗನ್ನಡದಲ್ಲಿ ಕಾಣಿಸಿಕೊಂಡ ಸಾಹಿತ್ಯ ಪ್ರಕಾರ. ದಿನಕರ ದೇಸಾಯಿ 'ಚುಟುಕು ಬ್ರಹ್ಮ' ಎಂದೇ ಕರೆಸಿಕೊಂಡಿದ್ದಾರೆ. ಅವರಿಂದ ಪ್ರತಿಭಾವಿತರಾದ ರಾಮ ಭಟ್ ಚೆನ್ನಂಗೋಡು, ಅವರ ಕಾವ್ಯನಾಮ ರಾಮಣ್ಣ ಚೆನ್ನಂಗೋಡು, ಕರ್ಾಡ ಭಾಷೆಯಲ್ಲೂ ಚುಟುಕು ಬರೆಯಲಾರಂಭಿಸಿದರು. ಹನಿಗವನಗಳೂ ಕನ್ನಡದ ಪ್ರಭಾವದಿಂದಲೇ ಕರ್ಾಡ ಭಾಷೆಗೆ ಬಂದುವು. ಡಾ। ಡಿ. ಸದಾಶಿವ ಭಟ್, ಮಧುಪಡ್ರೆ, ಮಾ.ಭ.ಪೆರ್ಲ ಕೊಮ್ಮುಂಜೆ ವೆಂಕಟ ಸುಬ್ಬರಾಯ ಮೊದಲಾದವರು ಚುಟುಕು ಸಾಹಿತ್ಯ ಬರೆಯುವವರಲ್ಲಿ ಪ್ರಮುಖರು.

೫. ೪. ೪ ರಾಮಣ್ಣ ಚೆನ್ನಂಗೋಡು ಅವರ ಚುಟುಕುಗಳು

ಅವುಂಥಿ ಭಾಸ (ನಮ್ಮ ಭಾಷೆ)

'ಔಂಥಿಭಾಸ ಮ್ಹಳ್ಳೆ ಬಲು ಇಷ್ಟ ಮುಕ್ಕ । ದಲ್ಯೆ ಕಶ್ಯಂ ಕರಪ ತೀ ಕೋಣ ನಕ್ಕ'
ತ್ಸವಗದಣ ಕೂಳ್ಳೆ ಕಡೆ ಕನ್ನಡಚಿ ಏರ । ಅಸಂ ಗೆಲ್ಲೆ ಈ ಭಾಸ ಅವಸಾನ ದಾರ ॥

(ನಮ್ಮ ಭಾಷೆ ಎಂದರೆ ಬಲು ಇಷ್ಟ ನನಗೆ, ಆದರೆ ಏನು ಮಾಡುವುದು ಅದು ಯಾರಿಗೂ ಬೇಡ ನಾಲ್ಕು ಜನ ಸೇರಿದೆಡೆ ಕನ್ನಡವೇ ಬರುತ್ತದೆ ಹೀಗೆ ಹೋದರೆ ಈ ಭಾಷೆ ಅವಸಾನವಾಗುತ್ತದೆ).

ರಾಮಣ್ಣ ಚೆನ್ನಂಗೋಡು ಅವರಿಗೆ ಕರ್‍ನಾಡ ಭಾಷೆಯ ಮೇಲೆ ಅಭಿಮಾನ. ಕರ್‍ನಾಡ ಭಾಷೆ ಗೊತ್ತಿದ್ದರೂ ಮಾತನಾಡುವವರು ಸಂಖ್ಯೆ ಕಡಿಮೆಯಾಗುತ್ತಿದೆ. ವ್ಯವಹಾರದಲ್ಲಿ ಅದು ಬಳಸದೆ ಇದ್ದರೆ ಈ ಭಾಷೆ ಮಾತನಾಡುವವರು ಕನ್ನಡದಲ್ಲೇ ಮಾತನಾಡಿದರೆ ಕರ್‍ನಾಡ ಭಾಷೆ ಅಳಿದು ಹೋಗಬಹುದು. ಎನ್ನುವ ಆತಂಕವನ್ನು ಸರಳ ಶೈಲಿಯಲ್ಲಿ ನಿರೂಪಿಸಿದ್ದಾರೆ.

ಪೊಪ್ಪಳಂ (ಅಡಿಕೆ)

'ಫೊಪ್ಪಳಾಂ ಕ್ರಯ ಅತ್ತಂ ಭಾರಿ ಉಣೆದಲ್ಲಂ । ಕುಂರ್ಟಾಣಿ ಆಚ್ಚಿಲ್ಲಂ ಪೌಲಾನಿ ಡ್ಯೆಲಂ । ಅಣಿದಲ್ಲಿಶೆತ್ನಾಕ ಕಾವಾತ್ಯೊ ನಕ್ಕಿಫ್ಯಾಚಾರ ಅಂಗಾರಿ ಒಡ್ಡುಂ ಘನ್ನಕ್ಕಿ॥'

(ಅಡಿಕೆಗೆ ಬೆಲೆ ಈಗ ತುಂಬ ಕಡಿಮೆಯಾಗಿದೆ. ಸೊಂಟದಲ್ಲಿ ಇದ್ದದ್ದು ಪಾದಕ್ಕೆ ಇಳಿದಿದೆ. ಇನ್ನೂ ಗದ್ದೆಗೆ ಅಡಿಕೆ ಸಸಿ ಇಟ್ಟು ತೊಂದರೆಯನ್ನು ಮೈ ಮೇಲೆ ಎಳಕೊಳ್ಳಬೇಡಿ)

'ಗದ್ದೆಗೆ ಅಡಿಕೆ ಸಸಿ ಇಡಬೇಡಿ' ಎನ್ನುವ ನೀತಿಯನ್ನು ಪ್ರಾಸದೊಂದಿಗೆ ಹೆಣೆದಿದ್ದಾರೆ.

ಸುನ್ನೇನೆ ವ್ಹಾಳ್ಳಲಂ (ಸೊಸೆ ಹೇಳಿದ್ದು)

"ಮಜ್ಜಿ ಮಾಯಿ ಒಟ್ಟ ಕಣೆ ತೀ ಬರಿ ಪಾಪ । ಉಲ್ಲೋಪ ಮಜ್ಜಣಿ ಭಾರಿ ಅಪರೂಪ। ಧೂವ ಜ್ವಾಮ್ಯೆ ಮಾತ್ರ ದಾಯೆಂದಲ್ಲಿಂ ಸ್ಯೊರಿಂ। ತೋಂಡ ಉಗ್ಘಳ್ಳೇರಿ ಗಾಂಧಾರಿ ಮಿಾರಿಂ॥"

(ನನ್ನ ಅತ್ತೆ ಇದ್ದಾರೆ. ಅವರು ಬರೀ ಪಾಪ. ನನ್ನಲ್ಲಿ ಮಾತನಾಡುವುದು ಭಾರಿ ಅಪರೂಪ. ಮಗಳು ಅಳಿಯ ಮಾತ್ರ ಬೇಕಾದ ನೆಂಟರು ಬಾಯಿ ತೆರೆದರೆ ಗಾಂದಾರಿ ಮೆಣಸು)

ಅತ್ತೆಯ ಗುಣ ಇಲ್ಲಿ ಸೊಗಸಾಗಿ ಬಂದಿದೆ ಶೈಲಿ ಉತ್ತಮವಾಗಿದೆ.

ಮತ್ಥಿಲಿ (ನನ್ನವಳು)

"ಮತ್ಥೆ ಯಜಮಾಂತ್ಯೇತ ಮನ ಭಂಗಾರ । ಕಿತ್ತು ಸರ್ತ್ಯೊ ವಿತ್ನಾರ್ಲಿಲಿಲೇ ಕಾಪಿ ದೇರ। ಏಕ ವಿಷಯ ವ್ಹಾಣ್ಯಾಕ ಮುಕ್ಕ ಬೇಜಾರ। ಭಂಗಾರ ಹಡ್ಯಾ ವ್ಹಾಣ್ಣು ನಿತ್ಯ ಜೂ ಖಾರ' ॥

(ನನ್ನ ಹೆಂಡತಿಯ ಮನಸ್ಸು ಭಂಗಾರ, ಎಷ್ಟು ಸಲ ಕೇಳಿದರೂ ಅವಳು ಕಾಫಿ ಕೊಡುತ್ತಾಳೆ. ಒಂದು ವಿಷಯ ಹೇಳಲು ನನಗೆ ಬೇಸರ ಚಿನ್ನ ತನ್ನಿ ಎಂದು ಹೇಳಿ ನಿತ್ಯವೂ ಪ್ರಾಣ ಹಿಂಡುತ್ತಾಳೆ)

ಈ ಚುಟುಕಿನಲ್ಲಿ ಅಂತ್ಯ ಪ್ರಾಸ ಬಂದು ಸೊಗಸಾಗಿದೆ. ತನ್ನ ಆಕಾಂಕ್ಷೆಯನ್ನು ಗಂಡನಿಗೆ ತಿಳಿಸಿದಾಗ ಆಗುವ ಮಾನಸಿಕ ಆಘಾತ ಈ ಚುಟುಕಿನ ಮೂಲಕ ಹೊರ ಹೊಮ್ಮಿದೆ. ತಿಳಿ ಹಾಸ್ಯದಿಂದ ಆರಂಭವಾದರೂ ಅಂತ್ಯದಲ್ಲಿ ಪತಿಗೆ ಆಘಾತವನ್ನುಂಟು ಮಾಡುವ ಅಂಶವೇ ಬಂದು ಪರಿಣಾಮಕಾರಿಯಗಿದೆ.

ಕಸಂ ಬರೇರ (ಹೇಗೆ ಬರೆಯುತ್ತಿ)

'ರಾಮಣ್ಣ ಈ ಪದ್ಯಂ ತುಕ್ಕ ಕಸಂ ಏರಿ?। ವಿಷಯ ಒಟ್ಟುಲೆ ಅತ್ಸ ಗೆರೆ ಮಾತ್ರ ಚಾರಿ । ಜೆನ್ನಾಕ ಗೆಲ್ಲೆ ಕಡೆ ಈಂ ಒಟ್ಟು ಮೇಡ್ರಿ । ಪೆನ್ನಂ ಧರ್ಲೆ ಭಾವ ಎಕ್ಕಿ ಕಡೆ ಕೂಡ್ರಿ'

(ರಾಮಣ್ಣ ಈ ಪದ್ಯ ನಿಮಗೆ ಹೇಗೆ ಬರುತ್ತದೆ? ವಿಷಯ ಎಲ್ಲವೂ ಇದೆ. ಆದರೆ ಗೆರೆ ಮಾತ್ರ ನಾಲ್ಕು, ತೋಟಕ್ಕೆ ಹೋದ ಕಡೆ ಇದು ಎಲ್ಲಾ ಸಿಗುತ್ತದೆ. ಪೆನ್ನು ಹಿಡಿದರೆ ಭಾವನೆಗಳು ಒಂದೇ ಕಡೆ ಸೇರುತ್ತವೆ)

ಅವರ ಬಗ್ಗೆ ಓದುಗರು ಕೇಳಿದ ವಿಚಾರವನ್ನು ತಿಳಿಸಿದ್ದಾರೆ. ಕೆಲವರು ಪ್ರಶ್ನಿಸಿದ್ದನ್ನು ತಿಳಿಸಿ ಅದಕ್ಕೆ ಸೂಕ್ತ ಉತ್ತರವನ್ನು ಕೊಟ್ಟಿದ್ದಾರೆ.

ಚೆನ್ನಾಂಗೋಡು ರಾಮಭಟ್ಟರ ಚುಟುಕುಗಳು ಉತ್ತಮ ಮಟ್ಟದ್ದಾಗಿವೆ. ನೂರಕ್ಕಿಂತಲೂ ಹೆಚ್ಚಿನ ಚುಟುಕುಗಳನ್ನು ಇವರು ಬರೆದಿದ್ದಾರೆ. ಅವುಗಳಲ್ಲಿ ಹೆಚ್ಚಿನವು ಪ್ರಾಸಬದ್ಧವಾಗಿದೆ. ಮಾರ್ಗದರ್ಶಿಯಾಗಿಯೂ ಕೆಲವು ಚುಟುಕುಗಳು ಬಂದಿವೆ. ಇವರ ಕವಿತಾಶಕ್ತಿ ಚುಟುಕುಗಳಲ್ಲಿ ಎದ್ದು ಕಾಣುತ್ತಿದೆ. ಸೀಮಿತ ಪರಿಧಿಯಲ್ಲಿ ವಿಶಾಲ ಅರ್ಥವನ್ನು ಕೊಡುವ ಇವರ ಚುಟುಕುಗಳು ಕರ್ನಾಡ ಭಾಷೆಯಲ್ಲಿ ವಿಶಿಷ್ಟ ಸ್ಥಾನವನ್ನು ಪಡೆದಿದೆ.

ಅಜ್ಜೇನೆ ಮ್ಹಳ್ಳಲಂ (ಅಜ್ಜಿ ಹೇಳಿದ್ದು)

"ಶಿತ್ತೊಡುಣೆ ಉಚ್ಚಿಡಂ ತೇಂ ಹಾವ ಮ್ಹಣ್ಣ । ಪೇಂಟೇ ಗೆಲ್ಲೊಲೊ ಎಂತಣ ಅಂಗಿ ಕಣ್ಣ । ಬಾಳಾಂತಿ ಬಾರೆಡಿ ಅಪ್ಪಳ್ಳಿದಾರ

ದೆಕ್ಚಂ ರಬ್ಬನ ದೇವಾ । ವೆಗ್ಗಿಂ ಎಪ್ಪರ ಮುಕ್ಕ ಹಾರ ॥

(ಮುಸುರೆ, ಎಂಜಲು ಅದು ನಾನು ಹೇಳುವುದಿಲ್ಲ. ಪೇಟೆಗೆ ಹೋದವನು ಬರುವಾಗ ಅಂಗಿ ತೆಗೆಯುವುದಿಲ್ಲ. ಬಾಣಂತಿ, ಮೈಲಿಗೆ ಮುಟ್ಟಿದರೂ ಆಗುತ್ತದೆ. ನೋಡಿ ನಿಲ್ಲುವುದಿಲ್ಲ, ದೇವರೇ ಒಮ್ಮೆ ನನ್ನನ್ನು ತೆಗೆದುಕೊಂಡು ಹೋಗು)

ಮಡಿ, ಮೈಲಿಗೆ, ಆಚಾರ, ಸಂಪ್ರದಾಯ, ಮುಸುರೆ, ಎಂಜಲು ಇವೆಲ್ಲ ಅಜ್ಜಿಯಂದಿರ ಕಣ್ಣೆದುರೇ ಕಣ್ಮರೆಯಾಗುತ್ತಿದೆ. ಇದನ್ನೆಲ್ಲಾ ನೋಡಿ ಅವರ ಮನಸ್ಸು ತಳಮಳಗೊಳ್ಳುತ್ತಿದೆ. ಆಧುನಿಕರಿಗೆ ಇದಾವುದರ ಗೊಡವೆಯೇ ಇಲ್ಲ. ಇಂಥ ಬದುಕೇ ಬೇಡ ಎನ್ನುವ ಭಾವನೆ ಅವರದು.

(ನಮ್ಮ) ಔಂಥ ಸಮಾಜ:- ಕಡಂದೇಲು ವಾಸುದೇವ ಭಟ್ಟ ವಿರಚಿತ ಚುಟುಕು.

"ಔಂಥ್ಯಾ ಸಮಾಜಾನ್ನು ಜಂಬಾರ ದಲ್ಲೆರಿ । ಹಕ್ಕಡ್ಯೆಂ ಕೂಣ್ಣು ಬಹುರೊಕ್ಕೇನ ತ್ಸಲ್ಲೆರಿ। ಬಾರ ಘಂಟಾಂಪುಡೆ ಕೋಣ ಏನಂತಿ। ಜವಣದಲ್ಲೆ ಕ್ಷಣ ಥ್ಯೆಂ ಕೋಣನಂತಿ" ॥"

(ನಮ್ಮ ಸಮಾಜದಲ್ಲಿ ಜಂಬ್ರಗಳಾದರೆ ಎಲ್ಲರೂ ಸೇರಿ ಚಂದದಲ್ಲಿ ನಡೆಸಿಕೊಡುತ್ತಾರೆ. ಹನ್ನೆರಡು ಗಂಟೆಗಿಂತ ಮೊದಲು ಯಾರೂ ಬರುವುದಿಲ್ಲ. ಊಟವಾದ ಕ್ಷಣ ಅಲ್ಲಿ ಯಾರೂ ಇಲ್ಲ)

೫.೪.೪.೨ ಡಾ। ಡಿ. ಸದಶಿವ ಭಟ್ಟ ಅವರ ಚುಟುಕುಗಳು

ತಾಳಮದ್ದಳೆ

"ತಾಳಮದ್ದಳ್ಯೇಂನು ಪಳ್ಳೊ ಘನವಾದು। ಖಾಲೀಚಿದಲ್ಲಿ ಸಭೆ ನಾ ಹಂಜ ಬೋದು। ಮ್ಹಣ್ಣು ಗೆಲ್ಲೆ ಕರೇಲ್ಲೆ ಕನ್ನಾಂನು ಹಂಚ | ಚರ್ಚೆ ಸರ್ತಣ ಲೈಟ ವಡ್ಡೊನು ವತ್ಸ"

(ತಾಳಮದ್ದಳೆಯಲ್ಲಿ ಘನವಾದ ಒಂದೆದ್ದು ಸಭೆ ಖಾಲಿಯಾಯಿತು ವಾದ ಮಾಡುವವರಿಗೆ ಬೋದವಿಲ್ಲ. ತಾಳಮದ್ದಳೆ ಮಾಡಿಸಿದವರು ಇವರ ಕಿವಿಯಲ್ಲಿ ಹೇಳಿ ಹೋದರು; ಚರ್ಚೆ ಮುಗಿದಾಗ ಲೈಟ್ ನಂದಿಸಿ ಹೋಗಿ ಎಂದು)

ಘನವಾದದಲ್ಲಿ ಮುಳುಗಿದ ಅರ್ಥದಾರಿಗಳಿಗೆ ತಮ್ಮತನವನ್ನು ಪ್ರದರ್ಶಿಸುವುದೇ ಮುಖ್ಯವಾಗಿರುತ್ತದೆ. ಅನ್ಯರಗೊಡವೆ ಇರುವುದಿಲ್ಲ.

ಪ್ರವೀಣು

'ರಾಜಕೀಯಾಂನು ಓ ಭಾರೀ ಪ್ರವೀಣು। ಓಟಾಂನು ಎಪ್ಪರಲೆ ಗೆಲ್ಪನೆಂಣು ಮ್ಹುಣ್ಣು। ಚಿಂತನಾಚಿ ವಿತ್ಸಾರ್ರ, ಲಜ್ಜ ಭಯ ಸೋಣ್ಣು। ಕಾಳೆ ಕಂಬಳ್ಯೇಕ ಕಲೆ ದಾರಿ ಕೀಣು॥'

(ರಾಜಕೀಯದಲ್ಲಿ ಇವನು ಭಾರೀ ಪ್ರವೀಣ, ಓಟಿನಲ್ಲಿ ಒಮ್ಮೆಯೂ ಗೆಲ್ಲಲಿಲ್ಲ ಎಂದು ಚಿಂತೆಯಿಲ್ಲದೆ ಭಯ, ನಾಚಿಕೆ ಬಿಟ್ಟು ಕೇಳುತ್ತಾನೆ ಕಪ್ಪು ಕಂಬಳಿಗೆ ಕಲೆಯಾಗುತ್ತದೋ ಎಂದು)

ರಾಜಕೀಯ ವ್ಯಕ್ತಿಗಳು ಕಪ್ಪು ಕಂಬಳಿಯಂತೆ ಏನಾದರೂ ಚಿಂತೆ ಇಲ್ಲ. ಹೇಗೂ ಇರ್‍ತಾರೆ.

ಚೋದ್ಯನಾ (ಪ್ರಶ್ನೆ ಇಲ್ಲ)

ಪೂರ್ವ ಪುಣ್ಯೇನ ಕಣೆ ಈ ಬೈಲ ಮೇಳ್ಳಿ। ನಿತ್ಯೆಲೆ ಎಣತೆಜ್ಜಿ ಸೇವ್ಯೆಲೆ ಕೆಲ್ಲಿ। ಹಕ್ಕ ಕಣ್ಣೇಚಿ ಕಣೆ ತೀ ಧೌವುನು ಗೆಲ್ಲಿ । ಚೋದ್ಯನಾ ಫುಳ್ಳೀಚಿ ವ್ಹಾಟ ತೆಣೆ ಧರ್ಲಿ ॥

(ಈ ಹೆಂಡ್ತಿ ಪೂರ್ವ ಪುಣ್ಯದಿಂದಲೇ ಸಿಕ್ಕಿದಳು. ನಿತ್ಯವೂ ಇವನು ಅವಳ ಸೇವೆಯನ್ನೂ ಮಾಡಿದ. ಇವನಿಗೆ ಗೊತ್ತೇ ಆಗಲಿಲ್ಲ ಅವಳು ಓಡಿ ಹೋದದ್ದು. ಪ್ರಶ್ನೇ ಇಲ್ಲ ಹಿಂದಿನ ದಾರಿಯನ್ನೇ ಅವಳು ಹಿಡಿದಳು)

ಪರಿಸರವಾದಿ

'ವಂಚಾಕ ಸಮ ರೂಖ ವಡ್ಡಾಯ ನಿತ್ಯ। ಹೊಳ್ಳೊ ಪರಿಸರವಾದಿ ಘೋಷಣ ಸ್ತುತ್ಯ। ವಂಚಾಂಕ ರೀಣಾಂಟು ಹತ್ಥಲಂ ಕೃತ್ಯ। ಬಹುಫುಳ್ಳೆ ರೂಖ ವಿಕ್ಕನು ಸಾರ್ಲೆ ಸತ್ಯ।

(ಬದುಕುವುದಕ್ಕೆ ಮರಗಳನ್ನು ಚೆನ್ನಾಗಿ ಬೆಳೆಸಬೇಕು. ದೊಡ್ಡ ಪರಿಸರವಾದಿ ಘೋಷಣೆ ಸ್ತುತ್ಯವಾದುದು. ಸಾಲದಿಂದ ಬದುಕಲು ಇವನದೇ ಕೃತ್ಯ. ಬಹು ಹಿಂದಿನ ಮರಗಳನ್ನುಮಾರಿ ಮುಗಿಸಿದನು ಸತ್ಯ)

ಡಾ। ಡಿ. ಸದಾಶಿವ ಭಟ್ಟರು ಹಲವಾರು ಚುಟುಕುಗಳನ್ನು ಬರೆದಿದ್ದಾರೆ. ಪ್ರಾಸ ಬದ್ಧವಾಗಿದ್ದು ಅಕ್ಷರ ಜೋಡಣೆಗಳು ಸೊಗಸಾಗಿವೆ. ಸೀಮಿತ ಪರಿಧಿಯೊಳಗೆ ವಿಶಾಲವಾದ ಅರ್ಥವನ್ನು ಹೊಂದುವ ಶಕ್ತಿ ಚುಟುಕುಗಳಿಗಿವೆ.

೫.೪.೪.೩ ಉದ್ಧಾರ – ಮಧು ಪಡ್ರೆ

"ಔಂಥ್ಯೆ ಸಮಾಜಾನ್ನು ಎಕ್ಕೂಚಿ ದೋಷು । ಎಕ್ಕೇಕ್ಕು ದೀಸು ಎಕ್ಕೇಕು ವೇಷು'

ವೇಷು ಘಲ್ಲೇರಿ ಅಸಂ ಒಟ್ಟುದಾರ । ವೇಷು ಘೇಳ್ಳೇರಿ ಸಮಾಜ ಉದ್ಧಾರದಾರ।"

(ನಮ್ಮ ಸಮಾಜದಲ್ಲಿ ಒಂದೇ ದೋಷ ಒಂದೊಂದು ದಿನ ಒಂದೊಂದು ವೇಷ. ವೇಷ ಹಾಕಿದರೆ ಹೀಗೆಲ್ಲಾ ಆಗುತ್ತದೆ. ವೇಷ ತೆಗೆದರೆ ಸಮಾಜ ಉದ್ಧಾರವಾಗುತ್ತದೆ.)

ಸಮಾಜ ಉದ್ಧಾರವಾಗಬೇಕಾದರೆ ಪ್ರಾಮಾಣಿಕರಾಗಿರಬೇಕು. ನಿಸ್ವಾರ್ಥ ಮನೋಭಾವಬೇಕು. ಮುಂತಾದ ವಿಚಾರಗಳ ಕಡೆ ದೃಷ್ಟಿ ಹಾಯಿಸಿದ್ದಾರೆ. ಪ್ರಾಸಕ್ಕೆ ಪ್ರಾಶಸ್ತ್ಯ ಕೊಟ್ಟಿದ್ದಾರೆ. ಚುಟುಕುಗಳೆಲ್ಲವೂ ಸಾಮಾಜಿಕ ಮೌಲ್ಯವನ್ನು ಪ್ರತಿಬಿಂಬಿಸುತ್ತವೆ.

೫. ೪. ೪. ೪ ಕಾವ್ಯಸಾರ ಕೊಮ್ಮುಂಜೆ ವೆಂಕಟ ಸುಬ್ಬರಾಯ

'ಕಾವ್ಯ ಕನ್ನಿಕೆ ಮ್ಹಣ್ಣು ಭಾರಿ ವರ್ಣನ ಕರ್ನು । ಸಾರ್ಲಂ ತೆಣ ಏಕ ಪುಸ್ತಕ ಪೂರ್ತಿ ಭರ್ನು।

ಕವಿ ಪತ್ನಿ ಎವುನು ವಾಚಿರ ರಣ್ಣು ರಣ್ಣು। ಕೋಣ ಈ ಸಾಂಗ ವತ್ಸಪ ನಕ್ಕ ಸೋಣ್ಣು।

(ಕಾವ್ಯ ಕನ್ನಿಕೆ ಎಂದು ಭಾರಿ ವರ್ಣನೆ ಮಾಡಿ ಅವನು ಒಂದು ಪುಸ್ತಕ ಪೂರ್ತಿ ಮುಗಿಸಿದನು. ಕವಿಯ ಪತ್ನಿ ಬಂದು ಓದಿ ಅತ್ತು ಅತ್ತು ಯಾರಿವಳು ಎಂದು ಹೇಳು ಬಿಟ್ಟು ಹೋಗಬೇಡ).

೫.೪.೪.೫ ಓ ಗುಟ್ಟು – ರಾಧಾ ಕೃಷ್ಣ ಭಟ್ಟ, ಕುರುಮುಜ್ಜಿ

೧. ಔಂಥ್ಯಾಸಮಾಜಾಂತು । ದಾವೊ ಒಗ್ಗಟ್ಟು

ಔಂಜ ಗೊಂತುದಾವೋ। ಓ ಗುಟ್ಟು

ನಮ: ಶಿವಾಯ । ಮತ್ತಿ ಪೋರ್ನಿ ಅಂಗಿ

ಘಟ್ಟೋನು ಬೈಲೇನೆ ಮಳ್ಳಂ। ತುಂಥಿ ಅಂಗಿದಲ್ಲಿ ನಮ:ಶಿವಾಯ । ತುಮ್ಮಿ ಅಣಿ ನವೀ ಶಿವಾಯ

ಶ್ರೀ ರಾಧಾಕೃಷ್ಣ ಭಟ್ಟ, ಕುರುಮುಜ್ಜಿ, ಇವರು ಬರೆದ ಚಿಕ್ಕದಾದರೂ ಚೊಕ್ಕ ಚುಟುಕುಗಳೆರಡು ಹಾಸ್ಯ ಪೂರ್ಣವಾಗಿ ಮನೋಜ್ಞವಾಗಿದೆ.

ನಮ್ಮ ಸಮಾಜದಲ್ಲಿ ಒಗ್ಗಟ್ಟಿರಬೇಕು. ಆ ಗುಟ್ಟು ನಮಗೆ ಗೊತ್ತಿರಬೇಕು. ಇದು ಮೊದಲ ಚುಟುಕಿನ ವಿಷಯವಾಗಿದೆ. ಮುಂದಿನ ಚುಟುಕಿನಲ್ಲಿ ನನ್ನ ಹಳೇ ಅಂಗಿಯನ್ನು ಹರಿದು ಹೆಂಡತಿ ಹೇಳಿದಳು ನೀವು ಇನ್ನು ಹೊಸತು ಹೊಲಿಸಿ ಎಂದು.

೫.೪.೪.೬ ಚುಟುಕುಗಳು–ಮಾ.ಭ.ಪೆರ್ಲ

'ಯೇರ ಎಂತಣ ಏಕು ಬೈಸರ್ನು ಮಾಣ। ವೇರ್‍ಯೆಲೆ ಎಕ್ಕೂಚಿ ಕಣ್ಣಸಂ ಕೋಣ ।

ಯಾ ಮಧ್ಯ ಅಧಿಕಾರು ಪೈಶಾಂಕ ಮ್ಹಣ್ಣು । ನಕ್ಕದಲ್ಲಲಂ ಕರ್ನು ಪಡ್ರುನರಕಾನ್ನು।

(ಬರುವಾಗ ಒಬ್ಬನೇ ಹೊರಟು ಬರುತ್ತಾನೆ. ಹೋಗುವಾಗಲೂ ಯಾರಿಗೂ ತಿಳಿಯದ ಹಾಗೆ ಒಬ್ಬನೇ ಹೋಗುತ್ತಾನೆ. ಈ ನಡುವೆ ಅಧಿಕಾರ ಹಣಕ್ಕೆ ಎಂದು ಬೇಡದ್ದನ್ನು ಮಾಡಿ ನರಕಕ್ಕೆ ಬೀಳುತ್ತಾನೆ).

ಮನುಷ್ಯನು ಬರುವಾಗ ಒಬ್ಬನೇ ಬರುತ್ತಾನೆ. ಹೋಗುವಾಗಲೂ ಒಬ್ಬನೇ ಹೋಗುತ್ತಾನೆ. ಏನನ್ನೂ ತರುವುದಿಲ್ಲ. ಏನನ್ನೂ ತೆಗೆದುಕೊಂಡು ಹೋಗುವುದಿಲ್ಲ. ಈ ವಿಚಾರ ತಿಳಿದೂ ತಿಳಿದೂ ಆತ ನರಕಕ್ಕೆ ಹೋಗುವ ಕಾರ್ಯಗಳನ್ನೇ ಮಾಡುತ್ತಿದ್ದಾನಲ್ಲ. ಅವನಿಗೆ ಅರಿವು ಯಾವಾಗ ಬರುವುದುದೆಂದು ತಿಳಿಯುವುದಿಲ್ಲ.

'ವೇದಾಂತ್ಲೊ ಅಧಿಕಾರು ನಾ ಮೇಳುಸಾಂಕ। ಗೊಂತುತ್ಸ ವಾಡಿಕಣೆ ಯೇಂ ಹಕ್ಕಡಾಂಕ

ಜಂಬಾರ ಜವಣಾಕ ಭಡ್ಕತಣ ಜಾಂಕ । ದೇರಿ ತಾಜ್ಜೆಲೆ ಇಚ್ಛ ಹತ್ತಾಕ ಉದಕ।'

(ವೇದದ ಅಧಿಕಾರ ಸ್ತ್ರೀಯರಿಗಿಲ್ಲ. ಈ ವಿಚಾರ ಎಲ್ಲರಿಗೂ ತಿಳಿದಿದೆ. ಜಂಬ್ರದ ಊಟಕ್ಕೆ ಕುಳಿತಾಗ ಸ್ತ್ರೀಯರಿಗೆ ಕೈ ನೀರು ಯಾಕೆ ಕೊಡುತ್ತಾರೆ)

ಜಂಬ್ರದ ಊಟಕ್ಕೆ ಕುಳಿತಾಗ ಐದು ಜನ ಮುತ್ತೈದೆಯರಿಗೆ ಹಸ್ತೋದಕ (ಕೈನೀರು) ಕೊಡುತ್ತಾರೆ. ಇನ್ನೊಂದೆಡೆ ವೇದದ ಅಧಿಕಾರ ಸ್ತ್ರೀಯರಿಗಿಲ್ಲ ಎಂದೂ ಹೇಳುತ್ತಾರೆ. ಒಂದಕ್ಕೊಂದು ತಾಳೆಯಾಗುವುದಿಲ್ಲ. ಏನಿದರ ಹಿನ್ನಲೆ?

ಬೇರೆ ಬೇರೆ ವಿಷಯಗಳಿಗೆ ಸಂಬಂಧಿಸಿ, ಪಾದ ನಾಲ್ಕರ ಈ ಚುಟುಕುಗಳು ಪೂರ್ಣಾರ್ಥವನ್ನು ಕೊಡುವ ಮುಕ್ತಕವಾಗಿ, ಹೃದ್ಯವಾಗಿದೆ.

೫.೫ ಕವನಗಳು:- ಡಾ। ಸದಾಶಿವ ಭಟ್ಟರು ಬರೆದು ಪ್ರಕಟಿಸಿದ ಅಮೃತ ವರ್ಷಿಣಿ: ಕರಾಡ ಭಾಷೆಯ ಭಾವಗೀತೆಗಳ ಮೊತ್ತ ಮೊದಲ ಸಂಕಲನವಿದು. ಈ ಕವನ ಸಂಕಲನಕ್ಕೆ ಶೀರ್ಷಿಕೆಯನ್ನು ಕೊಟ್ಟವರು. ಶ್ರೀ ಕೆ. ಎನ್. ಭಟ್ ಶಿರಾಡಿ ಪಾಲ್. ಇದರಲ್ಲಿ ವಿಚಾರ ಪೂರಿತ ಇಪ್ಪತ್ತೆರಡು ಪದ್ಯಗಳಿವೆ. ಎಡೆ ಎಡೆಯಲ್ಲಿ ಹದಿನಾರು ನೀತಿ ಬೋಧಕ ಅನುಷ್ಟುಪ್ ಶ್ಲೋಕಗಳಿವೆ".

'ಓಹೋ ಪಳೀರ ಪೋರಿ' (ಓಹೋ ನೋಡುತ್ತಾಳೆ ಹುಡುಗಿ) " ಹುಡುಗಿಯೊಬ್ಬಳ ವರ್ಣನೆಯ ಜೊತೆಗೆ ವಿದ್ಯಾಧಿದೇವತೆ ಶಾರದೆಯನ್ನೂ ತನ್ನಲ್ಲಿಗೆ ಬರುವಂತೆ ಆಹ್ವಾನಿಸುತ್ತಾರೆ. ಇಲ್ಲಿ ಹೇಳುವ ವಿಚಾರಗಳೆಲ್ಲವೂ ಹುಡುಗಿಗೂ ಶಾರದೆಗೂ ಅನ್ವಯಿಸುತ್ತದೆ.

ಕೊನೆಗೆ "ಪೈಶೆಕ್ಕಾರ ನಜ್ಜಕಿ ತುಕ್ಕ । ಖ್ಯೆಂ ಮೇಡ್ರಿಪ್ಪ ವಿದ್ವಾಂಸ॥
ಜ್ಞಾನಾಕತ್ತಂ ಅತ್ಸಕಿ ಮಾನು । ಕಾಲುಲೆ ಹಾಳ ಬದಲ್ಪತ್ಸ॥

ಲಕ್ಷ್ಮೀ ಸರಸ್ವತಿಯರು ಒಂದೆಡೆಯಲ್ಲಿ ನೆಲೆಸುವುದಿಲ್ಲವೆಂದು ಹಿಂದಿನವರ ಹೇಳಿಕೆ. ಇದನ್ನು ಇಲ್ಲಿ ಸಮರ್ಥಿಸಲಾಗಿದೆ.

"ಮಮತ ಸಮತ"ದಲ್ಲಿ ಸರಿಯಾಗಿ ಕೆಲಸ ಮಾಡಿ ಪ್ರತಿಯೊಬ್ಬರಲ್ಲಿಯೂ ಪ್ರೀತಿ ವಿಶ್ವಾಸವಿಡಬೇಕೆಂದು ಗಾಳಿಯ ಮೂಲಕ ನೀಡುವ ಸಂದೇಶವಿದೆ". "ಕಾಯಕಚಿ ಕೈಲಾಸು। ಸಹಕಾರು ಮಮತ। ವಾರಂಸಂಗರ ನಿತ್ಯ। ದಾಯಾಚಿ ಸಮತ॥"

'ವಿಶ್ವಾಸುದೇರಿ' (ವಿಶ್ವಾಸವಿಡು) ಕವನದಲ್ಲಿ ದೇವರಲ್ಲಿ ವಿಶ್ವಾಸವಿರಿಸಬೇಕು. ಎಲ್ಲರನ್ನೂ ನಂಬಿದರೆ ಅಪಾಯ ಶತಸ್ಸಿದ್ಧ. ತಾಯಿ ತಂದೆ ದೇವರು ಜನ್ಮಭೂಮಿ ಉಪಕಾರ ಮಾಡಿದವರನ್ನು ಮರೆಯುವುದೇ? ಎಂದು ಪ್ರಶ್ನಿಸುತ್ತಾ ಹಿಂದಿನವರು ನಡೆದ ದಾರಿಯನ್ನು ಬಿಡಬಾರದೆಂದು ಸೂಚಿಸುತ್ತಾರೆ.

'ಮಾನು ಮರ್ಯಾದ' ಇದೊಂದು ವಿಡಂಬನಾತ್ಮಕ ಕವನ. ಮಾನ-ಮರ್ಯಾದೆ ಇದೆರಡು ಇಲ್ಲದಿದ್ದರೆ ಸಾಯಬಹುದು. ಕೆಲವರು ಮದುವೆಯಾಡೊಡನೆ ತಾಯಿ ತಂದೆಯನ್ನು ಮರೆತು ಹೆಂಡತಿಯ ಗುಲಾಮರಾಗುತ್ತಾರೆ. ಇಂತಹ ಹೆಣ್ಣೊಬ್ಬಳನ್ನು ಹುಟ್ಟಿಸಿ ಬೆಳೆಸಿಕೊಟ್ಟ ಅವಳ ತಂದೆಯೇ ದೇವರಾದ ಶ್ರೀರಾಮನಿಗೆ ಸಮಾನ ಎಂದೆಣಿಸಿ, ಆರಾಧಿಸುವುದನ್ನು ಇಲ್ಲಿ 'ಮರ್ಯಾದಾ ಪುರುಷೋತ್ತಮ ಏಕು। ಲೋಕಾಂನ್ನತ್ಸಪ ಶ್ರೀರಾಮು॥ ತಜ್ಜಾಮಾಣ ವಟ್ಟದಲ್ಲೇರಿ। ಬೈಲೇಚಪ್ಪ ತೋ ಮಾಮು॥

ಮರ್ಯಾದಾ ಪುರುಷೋತ್ತಮನು ಲೋಕದ್ಲಲಿ ಒಬ್ಬನೇ. ಅವನೇ ಶ್ರೀರಾಮ. ಅನಂತರ ಇದ್ದದ್ದಾದರೆ ಹೆಂಡತಿಯ ತಂದೆ - ಅವನೇ ಮಾವ ಎಂದು ವಿಡಂಬಿಸಿ, ಗತಿಗೇಡು ಬಂದರೂ, ಮತಿಗೆಟ್ಟು ಮಾನ ಮರ್ಯಾದೆ ಬಿಡಬಾರದು ಎಂದು ಹೇಳಿದೆ.

ಹೂವಿನಂತೆ ಜೀವನ ಸಾಗಬೇಕೆನ್ನುವ ಸೂಚನೆ "ಫುಲ್ಲಾ ಕಣ್ಯೆದವು ತೇಂ ಜೀವನ" ಎನ್ನುವ ಪದ್ಯದಲ್ಲಿದೆ. ಬದುಕಿದಷ್ಟು ದಿನ "ಹಕ್ಕಡಾಂಕಿಲೆ ನಕ್ಕ ದ್ಯೆನಸಂ। ತೀನಿ ಘಡ್ಯಾಂ ಜೀವನ । ಕೀರ್ತಿ ಘರ್ಮಳು ಭರ್ನು ಫುಲ್ಲಾ । ಕಣ್ಯೆ ದವುತೇಂ ಪಾವನ ॥ ಎಲ್ಲರೂ ಮೆಚ್ಚುವಂತೆ ಮೂರುಗಳಿಗೆಯ ಜೀವನವಾದರೂ ಸಾಕು. ಅದು ಕೀರ್ತಿ ಎಂಬ ಪರಿಮಳ ತುಂಬಿ ಹೂವಿನಂತೆ ಪರಿಮಳಿಸುತ್ತಿರಬೇಕು.

'ಅಭ್ಯಾಸು ನಾಚಿ ತಕ್ಕ' (ಅಭ್ಯಾಸವೇ ಇಲ್ಲ ಅವನಿಗೆ) – ಮರ, ಕಲ್ಲು, ಮಣ್ಣು, ಕಾಣಿಸದ ಶಕ್ತಿಯನ್ನು ನಂಬಿದರೆ ನಮಗೆ ಉಪಕಾರ ಮಾಡುತ್ತದೆ. ದನ, ಎತ್ತು, ನಾಯಿ, ಎಮ್ಮೆ ಮೊದಲಾದವನ್ನು ಪ್ರೀತಿಯಿಂದ ಸಾಕಿದರೆ ಸಹಾಯ ಮಾಡುತ್ತದೆ. ಕಾಗೆ, ಕೋಳಿ, ಗಿಳಿ, ಗುಬ್ಬಚ್ಚಿ ಮೊದಲಾದವುಗಳಿಗೆ ಅನ್ನ ಹಾಕಿದರೆ ಅವು ನಮ್ಮನ್ನು ಮರೆಯುವುದಿಲ್ಲ. ಆದರೆ ಮನುಷ್ಯ "ಉಪಕಾರು ಕೆಲ್ಲೇರಿ ವಿಸರುಂಚೊ ಓ ಕಾಲು। "ಇದ್ದುಲೆ" ಮನುಷ್ಯಾಂಕ ಪತ್ಯೋಪನಕ್ಕ॥ ಪತ್ಯೋಪ ರೋಕ ತಾ ದೇವಾಕ ಎಕ್ಕಾಕ। ವಿಸರುಂಚೊ ಅಭ್ಯಾಸು ನಾಚಿತಕ್ಕ॥ ಉಪಕಾರ ಮಾಡಿದರೆ ಅದನ್ನೆಲ್ಲಾ ಜನ ಮರೆಯುವ ಕಾಲವಿದು. ಆದ್ದರಿಂದ "ಇದ್ದುಲೆ ಮನುಷ್ಯಾಂಕ" ನಂಬುವುದು ಬೇಡ. "ಇದ್ದುಲೆ" ಎನ್ನುವುದಕ್ಕೆ ಸ್ವಲ್ಪ ಮತ್ತು ಅಲ್ಪ ಎನ್ನುವ ಎರಡರ್ಥವಿದ್ದು, ಸ್ವಲ್ಪವೂ ಮನುಷ್ಯರನ್ನು ನಂಬಬಾರದು. ಕೇವಲ ಅಲ್ಪ ಮನುಷ್ಯರನ್ನು ಮಾತ್ರ ನಂಬಬಾರದು. ದೊಡ್ಡ ಮನುಷ್ಯರನ್ನು ನಂಬಬಹುದೆಂಬ ಶ್ಲೇಷೆಯ ಮೂಲಕ ಹೇಳಲಾಗಿದೆ. ಕೊನೆಗೆ "ಪುಣ್ಯಜನು" ದವುನಕ್ಕ ಪುಣ್ಯವಂತೂಚಿ ದಾ। ಮತ್ಯೇತ್ಸಂ ಬಲು ಋಣ ಒರೋಪನಕ್ಕ।" ಪುಣ್ಯಜನು ಆಗಬೇಡ ಪುಣ್ಯವಂತನಾಗೆಂದು ವಿರೋಧಾಭಾಸಾಲಂಕಾರ ಪ್ರಯೋಗ ಸುಂದರವಾಗಿದೆ. 'ಪುಣ್ಯಜನ' ಎನ್ನುವುದಕ್ಕೆ ಪುಣ್ಯವಂತ, ರಾಕ್ಕಸ ಎನ್ನುವ ಎರಡರ್ಥಗಳಿವೆ.

'ರಾಷ್ಟ್ರಧ್ವಜ' ಎಂಬ ಕವನದಲ್ಲಿ ಅದರ ಶ್ರೇಷ್ಠತೆಯನ್ನು ಸಾರುತ್ತಾ ರಾಷ್ಟ್ರಭಕ್ತಿಯನ್ನಿಡಬೇಕೆಂದು ಹೇಳಿದೆ.

'ದೆಖ್ಬಾಕ ತೇಂ ರೋಕ ಕಾರಾಫಳ' ಕಾಸರಕ ಹಣ್ಣು ನೋಡಲು ಕೆಂಪು ಕೆಂಪಾಗಿ ಉರುಟಾಗಿ ಬಹಳ ಚಂದವಿದೆ. ಆದರೆ ತಿಂದರೆ ಸಾಯುತ್ತದೆ. ಮನುಷ್ಯ ಕಾಸರಕ ಹಣ್ಣಿನಂತೆ ಹೊರಗೆ ನೋಡಲು ಚಂದ. ಆದರೆ ಒಳಗೆ ಆತನ ಗುಣ ದುರ್ಗುಣ ಹಾಗಾಗಿ

"ಪತ್ಯೋಪನಕ್ಕ ಬಹಿರಂಗ ಮಾತ್ರ ಪಳೋನು। ಅಂತರಂಗಲೆ ಪಳೆ ಏನ ಹಾಳ ॥
ದಾ ವಸ್ತುಪುರುಷು" ಸಮದಾರಕಿ ಖಯಾಕ ತೇಂ॥ ದೆಕ್ಬಾಕ ಬಹುರೋಕ ಕಾರಾಫಳ॥

' ವಸ್ತು ಪುರುಷ' ನಾಗೆಂದು ಹೇಳಿದುದು ಅರ್ಥಗರ್ಭಿತವಾಗಿದೆ. ಒಂದು ವಸ್ತುವಿನ ಬಾಹ್ಯ ಆಂತರಿಕ ಹಾಗೂ ಬಾಹ್ಯಾಂತರಿಕ ಹೀಗೆ ಮೂರು ವಿಧದಲ್ಲಿ ಪರೀಕ್ಷಿಸಿಸಂಪೂರ್ಣ ವಿಷಯ ತಿಳಿದುಕೊಳ್ಳುವವನಿಗೆ "ವಸ್ತು ಪುರುಷ"ನೆಂದು ಹೆಸರು.

'ಜಾಗ್ರತದಾಯಿ'– ಈ ಕವನದಲ್ಲಿ ಯುವಕನೊಬ್ಬ ಮದುವೆಯಾಗದ ಯುವತಿಯೊಬ್ಬಳ ಹಿಂದೆ ಮುಂದೆ ಬಂದು ಚೇಷ್ಟೆಯ ಮೂಲಕ ಅವಳನ್ನು ಒಲಿಸುತ್ತಾನೆ. ಪ್ರಾಯಪ್ರಬುದ್ಧೆಯಾದ ಅವಳು ಅವನಿಗೊಲಿಯುತ್ತಾಳೆ. ಇದನ್ನೇ "ವಾಘು ಗೈಕ್ಕಧರ್ನು ಖಾರಣು" ಹುಲಿ ದನವನ್ನು ಹಿಡಿದು ತಿನ್ನುತ್ತದೆಂದು ಧ್ವನಿಯ ಮೂಲಕ ಹೇಳಿದ್ದು ಸೊಗಸಾಗಿದೆ. ಹಲಸಿನ ಕಾಯಿ ಮರದಲ್ಲೇ ಹಣ್ಣಾದರೆ ಕಾಗೆ ಅದನ್ನು ತಿನ್ನದೆ ಬಿಡುವುದಿಲ್ಲ. ಹಾಗಾಗಿ "ಪೋಷಕಾಂಕ" ಫುಡೇಚಿ ಜಾಗ್ರತ। ದಾಯಿ ಪ್ಪಳ್ಳೆರಿ ಕಡ್ರುಕಿ॥ "ಪೋಷಕಾಂಕ" ಹಲಸಿನ ಮರ ನೆಟ್ಟು ಬೆಳೆಸಿದವರು, ಜಾಗ್ರತೆಯಿಂದ ಹಣ್ಣಾಗುವ ಮೊದಲೇ ಕೊಯಿದು ಹಣ್ಣಾಗುವಂತೆ ಮಾಡಬೇಕು. ಇಲ್ಲವೇ ಪದಾರ್ಥ ಮಾಡಬೇಕು. ಹಾಗೆಯೇ ಹೆಣ್ಣಿನ ಪೋಷಕರು ಎಚ್ಚರ ವಹಿಸಿ, ಪ್ರಾಯ ಭರಿತೆಯಾದೊಡನೆ ಮದುವೆ ಮಾಡಬೇಕೆನ್ನುವುದೇ ಈ ಪದ್ಯದ ಸಂದೇಶ.

'ವಿದ್ಯಾರಾಣಿ' ಎನ್ನುವ ಕವನದಲ್ಲಿ ಸರಸ್ವತಿ ವಿದ್ಯಾರಾಣಿ. ಹುಡುಗಿಯೊಬ್ಬಳ ಹೆಸರು ವಿದ್ಯಾರಾಣಿಯೂ ಹೌದು. ಇಬ್ಬರ ವರ್ಣನೆಯಲ್ಲೂ ಅಭೇದ ಕಲ್ಪಿಸಲಾಗಿದೆ. ಧ್ವನ್ಯಾತ್ಮಕ ಕವನ ಇದಾಗಿದ್ದು ಶ್ರದ್ಧೆಯಿಲ್ಲದಿದ್ದರೆ, ವಿದ್ಯೆ ಸಿದ್ಧಿಸದೆನ್ನುವ ತತ್ತ್ವವೂ ಪ್ರತಿಪಾದಿತವಾಗಿದೆ.

'ರೋಕಿ ಹೋಯೆಕಿ' (ಒಳ್ಳೆಯವಳು ಹೌದಾ) ಇಲ್ಲಿ ಲಜ್ಜೆ ನಾರಿಯರಿಗೆ ಭೂಷಣ. ಮದುವೆಯಾಗಿ ವರ್ಷಗಳು ಉರುಳಿದರೂ ಲಜ್ಜಾವತಿಯಾಗಿದ್ದರೆ ಒಳ್ಳೆಯದು ಎನ್ನುವುದನ್ನು ಶೃಂಗಾರ ರಸ ಭೂಯಿಷ್ಠವಾಗಿ ವರ್ಣಿಸಲಾಗಿದೆ.

'ನತ್ಯಂಕಿ',ದ.ರಾ ಬೇಂದ್ರೆಯವರ "ಕುಣಿಯೋಣು ಬಾರಾ" ಎಂಬ ಪದ್ಯದಿಂದ ಸ್ಫೂರ್ತಿ ಪಡೆದು ಬರೆದಂತಿದೆ. ಈ ಪದ್ಯ. ಸತಿಪತಿಯರ ಅನ್ಯೋನ್ಯದ ಪ್ರೇಮಾತಿರೇಕ ಇಲ್ಲಿ ಎದ್ದು ಕಾಣುತ್ತದೆ. ದಾಂಪತ್ಯ ಹೇಗಿರ ಬೇಕೆಂಬುದರ ಪ್ರತಿಪಾದನೆ ಇದರಲ್ಲಿದೆ.

'ದುರ್ಗಾಂಬಿಕೆ ರಾಖ ತೂಂ'(ದುರ್ಗಾಂಬಿಕೆ ಕಾಪಾಡು ನೀನು)–ಮಲ್ಲ ಶ್ರೀ ದುರ್ಗಾಂಬಿಕೆಯ ಸ್ತೋತ್ರವಿದು. ಶಾರ್ದೂಲ ವಿಕ್ರೀಡಿತದಲ್ಲಿದೆ. ಇದು ಮಂಗಲಪದ್ಯವಾಗಿದೆ ಮಲ್ಲ ಕ್ಷೇತ್ರದಲ್ಲಿ ನೆಲೆಸಿದ ದುರ್ಗಾಂಬಿಕೇ ನೀನು ಎಲ್ಲರಿಗೂ ಸೌಖ್ಯವನ್ನಿತ್ತು ರಕ್ಷಿಸೆಂದು ಪ್ರಾರ್ಥಿಸಲಾಗಿದೆ.

ಗೇಯಗುಣದಿಂದ ಕೂಡಿದ ಕರ್ಹಾಡ ಭಾಷೆಯ ಉತ್ತಮ ಕವಿತಾ ಸಂಕಲನ ಇದಾಗಿದೆ. ಈ ಕವಿತೆಗಳಲ್ಲಿ ಬರುವ ವಿಡಂಬನೆ ವ್ಯಂಗ್ಯಗಳು ತೀವ್ರವಾಗಿ ಮನಸ್ಸಿಗೆ ನಾಟುತ್ತದೆ. ಶೃಂಗಾರ ಹಾಸ್ಯಕ್ಕೆ ಪ್ರಾಧಾನ್ಯತೆ ಇದೆ. ಯುಕ್ತವಾದ ಛಂದಸ್ಸನ್ನೇ ಕವಿತೆಗಳಲ್ಲಿ ಬಳಸಲಾಗಿದೆ.

೫.೫.೧. ಕವನಾಂಸೋರು (ಕವನಗಳ ಮಾಲೆ)

ಇದು ಎರಡನೇಯ ಭಾವಗೀತೆಗಳ ಸಂಕಲನ ಇದರಲ್ಲಿ ಇಪ್ಪತ್ತೈದು ಕವನಗಳಿವೆ. ಕೆಲವು ಚುಟುಕು ಹಾಗೂ ಹನಿ ಗವನಗಳಿವೆ. ಇವುಗಳೆಲ್ಲ ಛಂದೋಬದ್ಧವಾಗಿ ಗೇಯಗುಣದಿಂದ ಕೂಡಿದೆ.

ಈ ಕವನ ಸಂಕಲನದಲ್ಲಿ ವೈವಿಧ್ಯದ ವಿಷಯಗಳಿವೆ. 'ಕವನಾಂಸೋರು' ಎಂದರೆ 'ಕವನಗಳ ಮಾಲೆ' ಎಂದರ್ಥ. ಇಲ್ಲಿ ಮೌಲ್ಯಾಧಾರಿತ ಕವನಗಳನ್ನು ಮಾಲೆಯಾಗಿ ಪೋಣಿಸಲಾಗಿದೆ.

ಕರ್ಹಾಡರ ಬದುಕು ಈ ಕವನಗಳಲ್ಲಿ ಅಭಿವ್ಯಕ್ತವಾಗಿದೆ. ಜನರಲೋಪದೋಷಗಳನ್ನು ತೋರಿಸಿಕೊಡುವ ಮೂಲಕ, ಸಮಾಜ ಸುಧಾರಣೆ ಮಾಡುವ ಪ್ರಯತ್ನ ಈ ಕವಿತೆಗಳಲ್ಲಿ ಕಾಣಬಹುದು.

ಈ ಸಂಕಲನದಲ್ಲಿರುವ ಕೆಲವು ಪದ್ಯಗಳು ಮಧ್ಯಮ ವರ್ಗದ ಜನರ ಭಾವನೆಯನ್ನು ಅರ್ಥಪೂರ್ಣವಾಗಿ ಪ್ರಕಟಿಸುತ್ತವೆ.

'ತುಕ್ಕಸೋಡು' (ನಿನಗೆ ನೆನಪು ಬರಲಿ) ಎನ್ನುವ ಕವನದಲ್ಲಿ ಇನ್ನೊಬ್ಬರ ಕಷ್ಟವನ್ನು ಕಂಡು ನಗಬಾರದು. ಮುಂದೆ ಆ ಕಷ್ಟ ತನಗೊ ಬರಬಹುದು ಎನ್ನುವ ವಿಚಾರ ಪ್ರತಿಯೊಬ್ಬನಲ್ಲೂ ಇರಬೇಕು ಎನ್ನುವುದನ್ನು ಚಿತ್ರಿಸುತ್ತದೆ.

'ಪೆಲ್ಲಾಥಿ ದುರ್ದಶ ಪಳೋನು ತೂಂ ಊಣ್ಣಕ್ಕ' ಇನ್ನೊಬ್ಬ ಕಷ್ಟದಲ್ಲಿರುವುದನ್ನು ಕಂಡು ಹಾರಾಡಬೇಡ. ಗರ್ವದಿಂದ ಸುಮ್ಮನೆ ನಗಬೇಡ. ಶುಕ್ರದೆಸೆ ನನಗೆಂದು ಗ್ರಹಿಸಬೇಡ.

ಮಧ್ಯಮ ವರ್ಗದ ಬದುಕು ಕಷ್ಟಸುಖವೆರಡರ ಅನುಭವದಿಂದ ಹಣ್ಣಾಗಿರುತ್ತದೆ. ಬಾಹ್ಯ ಪ್ರಪಂಚವನ್ನು ನೋಡುವಾಗ ಆ ಸ್ಥಿತಿ ತಮ್ಮದಾಗಬೇಕೆಂಬ ಆಶಾ ಭಾವನೆ ಹುಟ್ಟುತ್ತದೆ. ಆದರೆ ತಮ್ಮದನ್ನಾಗಿ ಮಾಡುವಲ್ಲಿ ಪ್ರಯತ್ನ ಪರಿಣಾಮಕಾರಿಯಾಗಲು ಸಾಧ್ಯ. ಈ ಕವನ ಸಂಕಲನದಲ್ಲಿರುವ ಕೆಲವು ಸಾಲುಗಳು ಮಧ್ಯಮ ವರ್ಗದ ಜನರ ಭಾವನೆಗಳನ್ನು ಪ್ರಕಟಿಸುತ್ತದೆ.

'ಕಡ್ರ ಖರ್ಚುಕರಾಕ ದೈನ ಒಟ್ಟು ಕರಾಕ । ಹರ್ಡಿ ಮುಂಜಿಣೆ ಒಟ್ಟು ಗೌಜೀನೆ ದಾರಿ
ಸಂಗತಾಚಿ ಪಳೋಪ, ಖೇಳಪ, ಪಿಯೋಪ ತೇಂ । ಅಚ್ಛಿಲ್ಲೆ ಕಣ್ಣಾಚಿ ಪೈಶೆ ತೇ ವೇರಿ'

ಖರ್ಚು ಮಾಡಲು ಗೊತ್ತಿದೆ. ಆದರೆ ಎಲ್ಲ ಮಾಡಲಾಗುವುದಿಲ್ಲ. ಮದುವೆ ಉಪನಯನಗಳೆಲ್ಲ ಗೌಜಿ–ಗದ್ದಲದಲ್ಲಿ ನಡೆಯುತ್ತದೆ. ಒಟ್ಟಿಗೆ ಇದ್ದು ಆಡುವುದು, ಕುಣಿಯುವುದು, ಕುಡಿಯುವುದಿದ್ದರೆ ಹಣ ಹೋಗುವುದು ಗೊತ್ತೇ ಆಗುವುದಿಲ್ಲ.

ಹಣ ಸೋರಿ ಹೋಗುವುದು ಹೇಗೆಂಬ ಅಂಶ ಇಲ್ಲಿ ವ್ಯಕ್ತವಾಗುತ್ತದೆ. ಅಭಿಮಾನವು ವ್ಯಕ್ತಿತ್ವ ನಿರ್ಮಾಣಕ್ಕಿರುವ ಅತ್ಯುನ್ನತ ಸಾಧನ. ಭಾಷೆ, ಜನ, ಐಕ್ಯತೆಗಳನ್ನು ಸಾರುವ ಪದ್ಯಗಳು ಆಶಾಭಾವನೆ, ಉದಾರತೆಯನ್ನು ಪ್ರಕಟಿಸುತ್ತವೆ. ಧರ್ಮ ಚಿಂತನೆಯಿಂದ ಆರಂಭವಾಗಿ ವಿಜ್ಞಾನಾಧಾರಿತ ವಿಷಯದವರೆಗೆ ಇದ್ದ ಲೇಖಕರ ಅನುಭವ ಈ ಕವನಗಳಲ್ಲಡಗಿದೆ. ದೂರದರ್ಶಿತ್ವ ಮತ್ತು ಸೂಕ್ಷ್ಮ ಬುದ್ಧಿ ಇವರ ಕೆಲವು ಕವಿತೆಗಳನ್ನು ಅಭ್ಯಾಸ ಮಾಡುವಾಗ ಅನುಭವಕ್ಕೆ ಬರುತ್ತದೆ.

'ಈ ಕೋಣ (ಇವಳು ಯಾರು) ಡಾ। ಸದಾಶಿವ ಭಟ್ ಬರೆದ ಒಂದು ಬಿಡಿ ಕವಿತೆಯಿದು. ನಿದ್ರೆಯನ್ನೂ ಹೆಣ್ಣೊಬ್ಬಳನ್ನೂ ಅಭೇದವಾಗಿ ವರ್ಣಿಸಲಾಗಿದೆ. "ಕರ್‍ರ ಉಪದ್ರೋ ನಿದ್ದಾ ಸಂಗರ, ವಚಣು ಮ್ಹಳ್ಳೆರಿ ಈ ಸೊಣ್ಣ" ಉಪದ್ರವಿಸುತ್ತಾಳೆ. ಮುಗಲು ಹೇಳುತ್ತಾಳೆ. ಹೋಗೆಂದರೂ ಇವಳು ದೂರ ಹೋಗುವುದಿಲ್ಲ. ಬಿಡುವುದಿಲ್ಲ– ನಿದ್ದೆ ಬೇಡವೆಂದರೂ ಅದು ಬರುವಾಗ ಬಂದೇ ಬರುತ್ತದೆ. ಬಿಟ್ಟು ಹೋಗುವುದೇ ಇಲ್ಲ. ಹಾಗೆಯೇ ಉದ್ರಿಕ್ತ ಹೆಣ್ಣು ವೇಳಾ "ವೇಳು ಅವೇಳು ನಾಸಂ ಭೇದು। ದೀಸಾಂ ಎಜ್ಜೆಣಿ ಶೇರ್ಪಲ್ಲೆ" ವೇಳೆಯನ್ನು ಗಣಿಸದೆ ಹಗಲಿನಲ್ಲಿ ಇವಳೊಡಗೂಡಿದರೆ ನಿಶ್ಚಯವಾಗಿಯೂ ಹಾಳು–ತಿಳಿದೂ ತಿಳಿದೂ ಇವಳ ಬಲೆಯಲ್ಲಿ ಬಿದ್ದವರೂ ಹೋದರು. ಹಗಲಿನ ನಿದ್ದೆ ಬಹಳ ಕೆಟ್ಟದೆನ್ನುವ ಜೊತೆಗೆ, ಇಂತಹ ಹೆಣ್ಣಿನೊಡನೆ ಸೇರಿದರೆ ಅವಳ ಬಾಳುವೆಯೇ ಹಾಳೆನ್ನುವ ವಿಚಾರ ಒತ್ತಿ ಹೇಳಲಾಗಿದೆ. "ರತ್ತೀಂದಾಯಿ ದೀಸಾಂ ನಕ್ಕ" ರಾತ್ರಿಯಲ್ಲಿವಳುಬೇಕು. ಹಗಲಿನಲ್ಲಿ ಬೇಡ ಯಾರಿವಳು? ನಿದ್ದೆ ಎನ್ನುವ ಹೆಣ್ಣು. ಇವಳಿಲ್ಲದಿದ್ದರೆ ಕಷ್ಟ. ಹೆಣ್ಣು, ನಿದ್ರೆ, ಎರಡೂ ರಾತ್ರಿಯಲ್ಲಿ ಬೇಕು. ಕುತೂಹಲ ಕೆರಳಿಸುತ್ತಾ ರಸಾತ್ಮಕವಾಗಿ ಸಾಗುವ ಈ ಕವಿತೆಯ ವಿಚಾರ ಕೊನೆಯಲ್ಲಿ ಸ್ಪಷ್ಟವಾಗುತ್ತದೆ.

೫.೫.೨ ಮಗ್ಗುಂಚಲೆ ಕೋಣ (ಬೇಡುವವರು ಯಾರು?)

ಇದೊಂದು ಅಪ್ರಕಟಿತ ಸಾಮಾಜಿಕ ಸಂಗೀತ ನಾಟಕ. ಇದನ್ನೇ ಹವ್ಯಕ ಕನ್ನಡದಲ್ಲಿಯೂ "ಬೇಡುವವು ಆರು"? ಎಂದು ರಚಿಸಿ ಅಭಿನಯಿಸಲಾಗಿದೆ. ಇದರಲ್ಲಿ ಒಟ್ಟು ಒಂಭತ್ತು ಪದ್ಯಗಳಿದ್ದು, ಏಳು ದೃಶ್ಯಗಳಿವೆ. ಆರು ಪದ್ಯಗಳೂ ಇರುವುದರಿಂದ ಒಂದುವರೆ ಗಂಟೆ ಅಭಿನಯನದ ನಾಟಕ ಇದು.

ನರಸಿಂಹ ಅರುವತ್ತೈದು ವರ್ಷದ ಶ್ರೀಮಂತ. ಸಂತಾನವಿಲ್ಲ. ಮೊದಲ ಹೆಂಡತಿ ಮೃತಳಾದ ಮೇಲೆ, ಎರಡನೆಯ ಮದುವೆಯಾದ ಹೆಂಡತಿ ಕಾವುರು. ಮೂವತ್ತು ವರ್ಷದ ಯುವತಿ. ನರಸಿಂಹ

ತಾನೂ ತಿನ್ನಲಾರ. ಇನ್ನೊಬ್ಬರಿಗೂ ಕೊಡಲಾರ. ಜಿಪುಣ. ಬರಗಾಲ ಪೀಡಿತ ಪ್ರದೇಶದಿಂದ ಬಂದ ಮಾಧವ ಮಧುಸೂದನ ಕಾಲೇಲ್‌ಕರ್ ಬೇಡುವ ವಿಧವೆ ಗಂಗಮ್ಮ, ಧನ ಸಹಾಯಾಕಾಂಕ್ಷಿ ಶಾಲೆಗೆ ಹೋಗುವ ಹುಡುಗ ಶಂಕರ, ಹುಡುಗಿಯನ್ನು ಹುಡುಕುತ್ತಾ ವಿವಾಹಾಪೇಕ್ಷಿಗಳಾದ ಗೋವಾದ ಮಾಧವ ತಮಣ್‌ಕರ್, ವಿಷ್ಣು ಪಟವರ್ಧನ್, ಸಂಘದ ಕಾರ್ಯಕರ್ತ ಭಾವಯ್ಯ ಎಂಬವರೆಲ್ಲರೂ ನರಸಿಂಹನನ್ನು ಭೇಟಿಯಾಗುತ್ತಾರೆ. ಆದರೆ ಅವನು ಅವರೆಲ್ಲರನ್ನೂ ಬೈದು ಭಂಗಿಸಿ ಓಡಿಸುತ್ತಾನೆ. ಹುಡುಗಿಯನ್ನು ಹುಡುಕುತ್ತಾ ಬಂದವರು ನರಸಿಂಹನ ಹೆಂಡತಿಯನ್ನೇ ಅವನ ಮಗಳೆಂದು ಎಣಿಸಿ, ಒಪ್ಪಿಗೆ ಸೂಚಿಸಿ ಪೆಟ್ಟು ತಿನ್ನದೆ ಜಾರುತ್ತಾರೆ. ಕಥಾ ವಸ್ತು ವಿಷ್ಟು. ಹಾಸ್ಯರಸವೇ ಮುಖ್ಯವಾಗಿದೆ.

"ಪಾಲಂ ದಯಾಕ ಜನ ಉಡ್ಕುನು ದೇರ್ನುಭಕ್ತಿ। ಲೀಲಾ ವಿನೋದಿ ಹರಿ ಮಗ್ಗರಿ ಭಾರಿ ಮುಕ್ತಿ॥

ಭೂಲೋಕು ಪಾಲಿಪುನು ಅತ್ಸ ಒರೋಂಚಿ ಶಕ್ತಿ। ಶ್ರೀ ಲೋಲು ತುಕ್ಕ ಸಮಸಂಗರಿ ಸುಪ್ರಭಾತ ॥"

ಹೀಗೆ ನರಸಿಂಹನ ಸುಪ್ರಭಾತದ ಮೂಲಕ ನಾಟಕ ಆರಂಭವಾಗುತ್ತದೆ. ಆ ಮೇಲೆ 'ಚಾ ತರಲು ಹೇಳಿದಾಗ ಹೆಂಡತಿಯೊಡನೆ ಜಗಳ ಆರಂಭವಾಗುತ್ತದೆ. ಕಾರಣ ಚಾ ಹುಡಿಯೇ ಇರಲಿಲ್ಲ. ನರಸಿಂಹ ಮಕ್ಕಳಾಗದುದಕ್ಕೆ ತನ್ನ ಪತ್ನಿಯನ್ನು ಹೀಗೆ ಛೇಡಿಸುತ್ತಾನೆ. "ಗೊಡ್ಡು ಮ್ಹೈಶೀಕ ಹಟ್ಯೇಂ ಘಾಂನು ದುದ್ದಾಕ ಬೊಬ್ಬೆ ಘಲ್ಲೆ ಕಸಂ ದೌಪ" ಹಟ್ಟಿಯಲ್ಲಿ ಗೊಡ್ಡು ಎಮ್ಮೆಯನ್ನು ಕಟ್ಟಿ ಹಾಕಿ ಹಾಲಿಗೆ ಬೊಬ್ಬೆ ಹಾಕಿದರೆ ಹೇಗೆ? ಅದಕ್ಕೆ ಅವಳೂ ಕೂಡ ಸರಿಯಾಗಿಯೇ ಉತ್ತರ ಕೊಡುತ್ತಾಳೆ" ಮ್ಹಂತಾರೊ ಬಿಯಾರೆಡ್ಡೊ ಅಚ್ಛಿಲ್ಲೆ ಕಡೇಕ ರೆಡ್ಡಿಲೆ ಗೊಡ್ಡೂಚಿ ದವುಪ" ಮುದಿ ಬೀಜದ ಕೋಣ ಇದ್ದಲ್ಲಿ "ಪಾರೋಳು" ಕೂಡ ಗೊಡ್ಡೇ ಆಗುತ್ತದೆ.

"ಮಗ್ಗುಂಚಲಾಂಕ ಭಾರಿ ಕುಶಾಲ. ವಾಟ ಅಚ್ಛಿಲ್ಲೇರಿ ವೈಕುಂಠಾ ಕಿಲೆ ವಚ್ಚುನು, ವಿಷ್ಣು ಕಿಲೆ ಘಾಂಟಿ ಪಡುಂಚಿ ಜಾತಿ." ಬೇಡುವವರಿಗೆ ಭಾರಿ ಕುಶಾಲು. ದಾರಿ ಇದ್ದರೆ ವೈಕುಂಠಕ್ಕೂ ಹೋಗಿ ವಿಷ್ಣುವಿಗೂ ಗಂಟು ಬೀಳುವ ಜಾತಿ ಬೇಡುವವರ ಬಗ್ಗೆ ನರಸಿಂಹನ ಅಭಿಪ್ರಾಯ ಹೀಗಿದೆ.

ಪಾಪಾಚೆಲೆ ಪೈಶಾಂಚೆಲೆ ಒಟ್ಟು । ಬೈಸರ್ರಿಕಣೇ ಮಗ್ಗಾಕ॥ ಸಂಘ ಸಂಸ್ಥ ದೇವಳ ಶಾಲ । ಹಕ್ಕಡ ಕರಪ ಮಗ್ಗಾಕೆ ॥

ಮಗ್ಗಿಲ್ಲಾಂಕ ದೆವುನುದೆವುನು ।ಐಲೊ ಅತ್ತಂ ಬರಗಾಲು ॥ ಸಂಗುಂ ಸಂಗುಂ ಬಡಿಪಲಂ ಅತ್ತಂ। ಅವುಂಕ ನಾಚಿ ಉಳಿಗಾಲು ॥

ಪಾಪದವರು ಶ್ರೀಮಂತರು ಎಲ್ಲರೂ ಬೇಡಲು ಶುರು ಮಾಡುತ್ತಾರೆ. ಸಂಘ, ಸಂಸ್ಥೆ ದೇವಾಲಯ, ಶಾಲೆ ಎಲ್ಲವೂ ಮಾಡುವುದು ಬೇಡುವುದಕ್ಕೆ. ಬೇಡಿದವರಿಗೆ ಕೊಟ್ಟು ಕೊಟ್ಟು ಬರಗಾಲ ಈಗ ಬಂದು ಬಿಟ್ಟಿತು. ಹೇಳಿ ಹೇಳಿ ಸಾಕಾಗಿ ಹೋಯ್ತು. ನಮಗೆ ಉಳಿಗಾಲವೇ ಇಲ್ಲ.

ನನ್ನ ಕೈ ಹಿಡಿದವ ಬಲಿಯಲ್ಲ ಅಂಬಲಿ. ಎಲ್ಲ ಕಡೆ ತಿನ್ನಲು ಇಲ್ಲದೆ ಬರಗಾಲ. ನಿಮ್ಮ ಊರಲ್ಲಿ (ಗೋವಾ) ಹುಡುಗಿಯರಿಗೆ ಬರಗಾಲ. ಇಂತಹ ಹಾಸ್ಯದ ಮಾತುಗಳು ಸಾಕಷ್ಟಿವೆ.

ಪೈಸೆ ಆಗಬೇಕಾದರೆ ಚೆನ್ನಾಗಿ ಕಷ್ಟ ಪಡಬೇಕು. ಕಾಸಿಗೆ ಕಾಸು ಗಂಟು ಹಾಕಿದರೆ ದುಡ್ಡಾಗುತ್ತದೆ ಎನ್ನುತ್ತಾರೆ. ಇಂತಹ ಮಾತುಗಳು ಅಲ್ಲಲ್ಲಿ ಬಂದಿದೆ.

೫.೫.೩. ಪಾರ್ಥ ಸಾರಥಿ: ಈ ಧ್ವನಿ ಸುರುಳಿಯಲ್ಲಿ ಕರ್ಣ ಪರ್ವದಿಂದಾರಿಸಿದ ಕಥಾ ವಸ್ತುವಿದೆ. ಕರ್ಣನ ಬಾಣಗಳಿಂದ ಆಘಾತಗೊಂಡ, ಯುಧಿಷ್ಠಿರನಿಂದ ಗಾಂಡೀವನಿಂದೆ, ಅರ್ಜುನನ ಪ್ರತಿಜ್ಞಾಪಾಲನೆಯ ಯತ್ನ, ಶ್ರೀ ಕೃಷ್ಣನ ಸಾಂತ್ವನ, ಪರಿಹಾರೋಪಾಯ, ಪಾರ್ಥನಿಂದ ಕರ್ಣನನ್ನು ಕೊಲ್ಲುವ ಪ್ರತಿಜ್ಞೆ ಇಲ್ಲಿದೆ. ಭಾಗವತರಾಗಿ ಕಲಾವಿದ ಶ್ರೀ ದಿವಾಕರ ಪಟ್ಟವರ್ಧನ್ ಸಹಕರಿಸಿದ್ದಾರೆ. ಅನ್ಯ ಭಾಷಿಕರಾದ ಇವರ ಹಾಡುಗಾರಿಕೆ ಬಹಳ ಸೊಗಸಾಗಿದೆ ಎಂದು ಬಹು ಜನರು ಪ್ರಶಂಸೆ ವ್ಯಕ್ತ ಪಡಿಸಿದ್ದಾರೆ. ಇಂಗ್ಲೀಷ್, ಹಿಂದಿ, ಸಂಸ್ಕೃತ ಭಾಷಾ ಧ್ವನಿಸುರುಳಿಗಳಲ್ಲಿಯೂ ಹಾಡಿದ್ದಾರೆ.

೫.೫.೪. ಅವಳ ಶ್ರೀ ದುರ್ಗಾಪರಮೇಶ್ವರೀ ಸುಪ್ರಭಾತಣೆ– ಭಕ್ತಿಗೀತೆ

ಕರ್ಹಾಡ ಭಾಷೆಯ ಪ್ರಪ್ರಥಮ ಸುಪ್ರಭಾತ ಹಾಗೂ ಭಕ್ತಿಗೀತೆಗಳ ಧ್ವನಿ ಸುರುಳಿ ಇದಾಗಿದೆ. ಸಂಗೀತ ವಿದುಷಿ ಶ್ರೀಮತಿ ಪ್ರೇಮಲೀಲಾ ಆಟಿಕುಕ್ಕೆ, ಇವರು ರಾಗ ಸಂಯೋಜನೆ ಮಾಡಿ ಹಾಡಿದ್ದಾರೆ. ಸಹ ಗಾಯಕಿಯಾಗಿ ಸಂಧ್ಯಾಗೀತ, ಗಿರಿ ಇವರು ಸಹಕರಿಸಿದ್ದಾರೆ.

ಭಕ್ತಿಗೀತೆಗಳಲ್ಲಿ "ಅವಳಾಂಬಿಕೆ ದುರ್ಗಾಂಬೆ ಮತ್ತು 'ದೇವರ ದಿವ್ಯಜ್ಞಾನ" ಎಂಬೆರಡು ಗೀತೆಗಳನ್ನು ಶ್ರೀ ಅಶೋಕ ನಾವಡ ಉಪ್ಪಳ ಇವರು ಹಾಡಿದ್ದಾರೆ.

೫.೫.೫ ಬಾಂಧವ್ಯ – ಸಣ್ಣಕತೆ

ಶ್ರೀಮತಿ ಸಂಧ್ಯಾಗೀತ, ಗಿರಿ ಅವರ 'ಬಾಂಧ್ಯವ್ಯ' ಕತೆ ಕರಾಡ ಭಾಷೆಯಲ್ಲಿ ಬರೆದುದಾಗಿದೆ. ಆಧುನಿಕ ಕುಟುಂಬಗಳಲ್ಲಿ – ವಿಶೇಷವಾಗಿ ನಗರವಾಸಿ ಕುಟುಂಬಗಳಲ್ಲಿ ಹೆಚ್ಚಿನ ತಂದೆ ತಾಯಿಗಳು ಅನುಭವಿಸುತ್ತಿರುವ ಮಕ್ಕಳ ಮಾನಸಿಕ ಸಮಸ್ಯೆಯನ್ನು ಮಗು ಶಾರ್ವರಿಯ ಮೂಲಕ ಇಲ್ಲಿ ಪ್ರಸ್ತುತಪಡಿಸಲಾಗಿದೆ. ಆಡಲು, ಹಾಡಲು, ಕತೆ ಹೇಳಲು ಅಜ್ಜಪ್ಪ ಮನೆಯಲ್ಲಿಲ್ಲದಾಗ ಶಾರ್ವರಿಯ ತೊಳಲಾಟ ಆ ಎಳೆಯ ಮನಸ್ಸಿಗಾಗುವ ಆಘಾತಗಳ ಚಿತ್ರಣ ಮನಮುಟ್ಟುವಂತಿದೆ. ಡಾಕ್ಟರರನ್ನು ಭೇಟಿಯಾಗಿ ಮನೆಗೆ ಹಿಂದಿರುಗಿದಾಗ ಬಾಗಿಲ ಬಳಿ ಕುಳಿತಿದ್ದ ಅಜ್ಜಪ್ಪನನ್ನು ನೋಡಿ ತಾಯಿಯ ಮಡಿಲಿನಿಂದ ಫಕ್ಕನೆ ಜಿಗಿದು ಅಜ್ಜಪ್ಪನ ಬಳಿ ಬಂದು ಅಜ್ಜಪ್ಪನನ್ನು ಗಟ್ಟಿಯಾಗಿ ಹಿಡಿದು "ಇತ್ತು ದೀಸ ತೂಂ ಖ್ಯೆಂ ಗೆಚ್ಚಿಲೊ ಅಜ್ಜಪ್ಪಾ? ಅಣಿ ಮಾತ್ರ ಅಸಂ ವತ್ಸುನಕ್ಕ" ಇಷ್ಟು ದಿನ ನೀನು ಎಲ್ಲಿಗೆ ಹೋಗಿದ್ದಿಯಾಯ್ತು ಅಜ್ಜಪ್ಪಾ ಇನ್ನು ಮಾತ್ರ ಹೀಗೆ ಹೋಗಬೇಡ, ಎಂದಾಗ ಓದುಗರಿಗೆ ಹೃದಯ ಹಿಚುಕಿದಂತಾಗುತ್ತದೆ. ಮಗುವಿನ ಮುಗ್ಧ ಮನಸ್ಸನ್ನು ಅರಿಯದೆ ಅದಕ್ಕೆ ಬೇಕಾದುದನ್ನು ಕೊಡದೆ ಮತ್ತೆಲ್ಲವನ್ನೂ ಕೊಟ್ಟು ತೃಪ್ತಿ ಪಡುವ ತಂದೆ ತಾಯಿಗಳು ಅದರಿಂದುಂಟಾಗುವ ಸಮಸ್ಯೆ, ಇತ್ಯಾದಿಗಳತ್ತ ಗಮನ ಸೆಳೆಯುವ ಈ ಕಥೆ ಅಜ್ಜಪ್ಪನ ಮೂಲಕ ಶಾಶ್ವತ ಪರಿಹಾರವನ್ನು ಸೂಚಿಸುತ್ತದೆ.

ಕರ್ಹಾಡ ಭಾಷೆ ಇನ್ನೂ ಗ್ರಾಂಥಿಕವಾಗಿ ಬೆಳೆಯದಿರುವುದರಿಂದ ಭಾಷಾ ಸ್ಖಾಲಿತ್ಯಗಳು ಸಹಜವಾಗಿ ನುಸುಳಿಕೊಂಡಿವೆ. ಬಳಸಿದ ತಂತ್ರ ನಾವಿನ್ಯತೆಯನ್ನು ಹೊರತು ಪಡಿಸಿಯೂ ಪ್ರಭಾವ ಶಾಲಿಯಾಗಿದೆ. ಒಟ್ಟಿನಲ್ಲಿ ಇದೊಂದು ಒಳ್ಳೆಯ ಕತೆ.

೫.೫.೬. ಗೋವಾಷ್ಟಕ, ದೂದವಿಕ್ಷಪ, (ಹಾಲು ಮಾರುವುದು) ಔಂತ ಸಮಾಜ (ನಮ್ಮ ಸಮಾಜ)

'ಶಿವಪಡ್ರೆ' 'ಕಾವ್ಯ ನಾಮದ' ಶ್ರೀ ಶಿರಂತಡ್ಕ ವಾಸುದೇವ ಭಟ್ಟರ' ಗೋವಾಷ್ಟಕ' ವಾಸ್ತವವನ್ನೇ ಹೊತ್ತು ನಿಂತ ಒಂದು ಶ್ರೇಷ್ಠ ಕವನ.

ದಕ್ಷಿಣ ಕನ್ನಡ ಕಾಸರಗೋಡು ಕಡೆಯಿಂದ ಕರ್ವಾಡ ಹುಡುಗಿಯರನ್ನು ಗೋವೆಯ ಕಡೆ ಮದುವೆ ಮಾಡಿ ಕೊಡುವುದು ಕಂಡು ಬರುತ್ತದೆ. ಅದರಲ್ಲಿಯೂ ವಿಧುರರಿಗೆ ಕೊಡುವುದೇ ಹೆಚ್ಚು. ಮದುವೆ ಮಾಡಿ ಕೊಟ್ಟ ಮೇಲೆ, ಆ ಕಡೆ ತಲೆಯೆತ್ತಿ ನೋಡದ ತಾಯ್ತಂದೆಯರೂ ಇದ್ದಾರೆ. ಗಮನಿಸುವವರೂ ಇದ್ದಾರೆ. ಮದುವೆಯಾಗಿ ಇಲ್ಲಿಂದ ಕರೆದುಕೊಂಡು ಹೋದ ಹುಡುಗಿಯರನ್ನು ಉತ್ತಮ ರೀತಿಯಲ್ಲಿ ನೋಡಿಕೊಳ್ಳುವವರೂ ಇದ್ದಾರೆ. ಹಿಂಸೆ ಕೊಡುವವರೂ ಇದ್ದಾರೆ. ಯಮ ಯಾತನೆಯನ್ನು ಅನುಭವಿಸುತ್ತಿರುವ ಹೆಣ್ಣೊಬ್ಬಳಿಗೆ ಅವಳ ತಾಯಿ ಕಾಗದ ಬರೆದಿದ್ದು, ಅದಕ್ಕೆ ಉತ್ತರ ಬರೆದ ಪತ್ರವೇ ಈ ಹಾಡು. ಈ ಗೋವೆಯಲ್ಲಿ ಬದುಕುವುದೇ ಕಷ್ಟ. ಹಣೆ ಬರಹ ನನ್ನದು'' ವಾಗ್ಫಾಚ ಮಾಡಿನ್ನು ಘಲ್ಲಿ ತುಮ್ಮಿಲೆ ಮುಕ್ಕ'' ಹುಲಿಯ ಬಿಲದಲ್ಲಿ ನನ್ನನ್ನು ಹಾಕಿದಿರೆನ್ನುವ ಹೋಲಿಕೆ ಉತ್ತಮವಾಗಿದೆ. ಕಾಲ ಬದಲಾದರೂ ಗೋವೆಯ ಜನರ ಕ್ರಮ ಬದಲಾಗಲಿಲ್ಲ ಎನ್ನುವ ಚಿತ್ರಣ ಯಥಾರ್ಥವಾಗಿದೆ. "ಓ ಜಾಗೊ ಈ ಭಾಸ, ಹಾಂಗತ್ಸಂ ಯೇಂಜನ'' ಎಲ್ಲವೂ ವೋಸ. ಮದುವೆಯಾಗಿ ಗಂಡನ ಮನೆಯಲ್ಲಿ ಸುಖ ಸಂಸಾರ ನಡೆಸಬೇಕಾದವಳಿಗೆ ಹದಿನೈದೇ ದಿನದಲ್ಲಿ ಗಂಡನೇ ಬೇಡವೆಂದಾಗಿದೆ. ಮುದುಕು ಗಂಡ, ಮನೆ, ಇಲ್ಲಿಯ ಮನುಷ್ಯರು ಎಲ್ಲವೂ ಹಾಳು. ರೋಗಿಷ್ಟನಾದ ಮಾವ, ಯಾವಾಗಲೂ ಗದರಿಸಿ ಸತಾಯಿಸುವ ಅತ್ತೆ, ಮೊದಲ ಹೆಂಡತಿಯಲ್ಲಿ ಹುಟ್ಟಿದ ತನ್ನ ಜೀವ ತಿನ್ನುವ ಎಂಟು ಮಕ್ಕಳು, ಮುದಿ ಗಂಡ ಬೆಳಗ್ಗೆ ಎದ್ದು ಹೋದರೆ ಬರುವುದು ರಾತ್ರಿ ಕೊನೆಗೆ ನಾಯಿ ಬೊಗಳಿದಾಗ ನಿಮ್ಮ (ತಾಯಿ ತಂದೆಯರ) ದಾರಿ ನೋಡುತ್ತಿದ್ದೇನೆ. "ಕಾಗದ ಮೇಳ್ಳಸಂ ಯಾ ಯಾ ವೆಗ್ಗಿಂ "ಕಾಗದ ಸಿಕ್ಕಿದೊಡನೆ ಬೇಗನೆ ಬನ್ನಿ ಬನ್ನಿ. ಇಲ್ಲದಿದ್ದರೆ "ಬಾಯೆಕಿ ವಾಲೀಕಿ ಸೊದ್ದಿರ ಹಾವಂ ಬಾವಿಯನ್ನೊ ಹಗ್ಗವನ್ನೊ, ಹುಡುಕುತ್ತೇನೆಂದು ಪತ್ರ ಪೂರ್ಣವಾಗಿದೆ. ಇಲ್ಲಿ 'ಯಾ ಯಾ' ಎನ್ನುವ ದ್ವಿರುಕ್ತಿ ಔಚಿತ್ಯ ಪೂರ್ಣವಾಗಿದೆ. ಅವಳಲ್ಲಿರುವ ಉತ್ಕಂಠೆಯ ತೀವ್ರತೆಯ ಅರಿವಾಗುತ್ತದೆ.

ದೂದವಿಕ್ಕಪ (ಹಾಲು ಮಾರುವುದು): ರಾಷ್ಟ್ರಕವಿ ಗೋವಿಂದ ಪೈಯವರ "ಪಾಲುಮಾರಿಕ ಪದ್ಯದ ಭಾವಾನುವಾದವೆಂದು ಲೇಖಕರೇ ಹೇಳಿದ್ದಾರೆ. ಹಾಲು ಮಾರುವವಳೊಬ್ಬಳು ಲಾಭದಾಸೆಯಿಂದ ಹಾಲಿಗೆ ನೀರು ಸೇರಿಸಿ, ಕೊಡ ತುಂಬಿ ದೋಣಿಯಲ್ಲಿ ಹೋಗುವಾಗ ಅವಳ ಬೆಂಡು ನೀರಿಗೆ ಬೀಳುತ್ತದೆ. ಚಿನ್ನ ಹೋಯಿತೆಂದು ಅವಳು ಕೂಗುತ್ತಾಳೆ. ಆಗ ದೋಣಿಯಲ್ಲಿದ್ದ ರಸಿಕ ನೀರಿಗೂ ಬರಗಾಲವಿಲ್ಲ ಚಿನ್ನಕ್ಕೂ ಬರಗಾಲವಿಲ್ಲ. ಹಿಂದಿನ ಕೆಲಸ (ಹಾಲಿಗೆ ನೀರು ಸೇರಿಸುವುದು)ಕ್ಕೇನೂ ತೊಂದರೆಯಿಲ್ಲ. ಪ್ರಾಯವೂ ಆಗಿಲ್ಲ. ನೀರಿನ ಪಾಲು ನೀರಿಗೆ. ಉಳಿದದ್ದು ಹಾಲಿನ ಪಾಲು ಮಾತ್ರ. ಮಾಡಿದ ಕೆಲಸಕ್ಕೆ ಸರಿಯಾಗಿ ಕೂಲಿ ಸಿಕ್ಕದೆ ಇರುತ್ತದೆಯೇ? ಎಂದು ಕೇಳುತ್ತಾನೆ. ಮೂಲ ಪದ್ಯದ ಆಶಯ ಕೆಡದಂತೆ ಎಚ್ಚರವಹಿಸಿದ್ದಾರೆ.

ಔಂತ ಸಮಾಜ (ನಮ್ಮ ಸಮಾಜ): 1963 ರಲ್ಲಿ ಚೌಪದಿಯಲ್ಲಿ ಬರೆದು ಪ್ರಕಟಿಸಿದ್ದಾರೆ. ದೈವ ಭಕ್ತಿ, ಮನುಷ್ಯ ಪ್ರಾಣಿ, ಜೀವನ ಧರ್ಮ, ರೋಕಹಾಳ (ಒಳ್ಳೆದು ಕೆಟ್ಟದ್ದು), ಜಾತಿ ನೀತಿ, ನಿಜ ಸ್ಥಿತಿ ಬೋಡಾರ್ಲಂ ಬರಪ (ಹಣೆಯ ಬರಹ)ಹೋಡು ಸಾನು (ದೊಡ್ಡವ ಸಣ್ಣವ) ಎನ್ನುವ ವಿಚಾರದಲ್ಲಿ ಚೌಪದಿಯ ಮೂವತ್ತೆರಡು ಪದ್ಯಗಳು ಇದರಲ್ಲಿವೆ. ಮಂಗಲ ಪದ್ಯದಲ್ಲಿ ಹೇಳಿದಂತೆ ಕರ್ವಾಡರ ಕಥೆ, ಜಾತಿಯ ನಡತೆ, ಗುಣದೋಷ ಮೊದಲಾದ ವೈಪರೀತ್ಯಗಳನ್ನು ಇದರಲ್ಲಿ ಎತ್ತಿ ತೋರಿಸಿದ್ದಾರೆ.

ಮಂಕುತಿಮ್ಮಾತಿಂ ಚಾರಿಪದ್ಯಂ:– ಮಂಕುತಿಮ್ಮನ ನಾಲ್ಕು ಪದ್ಯ)
ಡಿವಿಜಿಯವರ ಮಂಕುತಿಮ್ಮನ ಕಗ್ಗದ ನಾಲ್ಕು ಪದ್ಯಗಳ ಅನುವಾದ ಪದ್ಯಗಳಿವು. ಕಗ್ಗದ ಛಂದಸ್ಸನ್ನೇ ಬಳಸಿದಂತಿದೆ.

೫.೫.೭. ಯಾಮಗ್ಗಿಲೇಂ:- (ಹಿಂದಕ್ಕೆ ಬನ್ನಿ) ಜಯಶ್ರೀ ಎಸ್. ಪೆರ್ಲ ಇವರ ಕವನವಿದು. ಹಿಂದಕ್ಕೆ ಬನ್ನಿ ಎನ್ನುವುದು ಕವನಾರ್ಥ. ಹಿಂದಣ ಆಚಾರ ವಿಚಾರಗಳನ್ನು ಕೆಟ್ಟದೆಂದು, ದೂರವಿಡುವುದು, ನಾವೀಗಿನವರು ನವ್ಯ ಕ್ರಮ ನಮ್ಮದು, ದೇವರು, ಧರ್ಮ ನಮಗೆ ಬೇಡ. ವಿಜ್ಞಾನವನ್ನೇ ನಂಬಿ, ಇಲ್ಲಿವರೆಗೆ ಬಂದೆವು. ಆದರೆ ಮುಂದಿನ ದಾರಿ ಕಾಣುವುದಿಲ್ಲ. ಕಣ್ತೆರೆದು ನೋಡಿದರೆ ಮುಂದಿನ ದಾರಿ ಅಂಧಕಾರ ಮಯ. ಹೀಗೆ ಮುಂದೆ ಹೋದರೆ ಹೊಂಡಕ್ಕೆ ಬೀಳುವುದು ನಿಶ್ಚಯ'' ಹಾಗಾಗಿ ಔಂಜ ನಕ್ಕ ಈ ವಾಟ ವಚ್ಚಂ ಮಾಗ್ಗಿಲೆಂ ಪರ್ತುಂ'' ನಮಗೆ ಈ ದಾರಿ ಬೇಡ, ಹಿಂದಕ್ಕೆ ಹೋಗುವ, ಹಿಂದಣ ಧರ್ಮದ ದಾರಿಗೆ. ''ನವ್ಯ ವಿಜ್ಞಾನಾಂಗತ ಫುಳ್ಳೊ ಆಚಾರುಲೆ ಕೂಣ್ಣು । ದಾಕ್ಕೋವು ಉಚ್ಚಾಡು ಔಂಜ ಫುಳ್ಳೆಂ''। ಹೊಸ ವಿಜ್ಞಾನದೊಡನೆ ಹಿಂದಿನ ಆಚಾರ ಸೇರಿ ನಮಗೆ ಬೆಳಕು ತೋರಿಸಲಿ. ''ಋಷಿ ವಾಕ್ಯದೊಡನೆ ವಿಜ್ಞಾನ ಕಲೆ ಮೇಳೈಸೆ'' ಡಿ.ವಿ.ಜಿಯವರ ಮಾತು ನೆನಪಾಗುತ್ತದೆ. ನಾಲ್ಕು ಪದ್ಯಗಳ ಈ ಕವನ ಸೊಗಸಾಗಿದೆ.

ಹೀಗೆ ವೈವಿಧ್ಯಪೂರ್ಣವಾದ ಸಾಹಿತ್ಯ ನಿರ್ಮಾಣ ಕರ್ಹಾಡ ಭಾಷೆಯಲ್ಲಾಗುತ್ತಿದೆ. ಕರ್ಹಾಡ ಭಾಷಾ ಸಾಹಿತ್ಯ ಉಳಿದ ಭಾಷಾ ಸಾಹಿತ್ಯದಂತೆ ಬೆಳೆಯಬೇಕು. ನಿರಂತರ ಸಾಹಿತ್ಯ ಸೃಷ್ಟಿಯಾದರೆ ಸಾಹಿತ್ಯ ಭಂಡಾರ ಬೆಳೆಯಬಹುದು.

ಟಿಪ್ಪಣಿ

೧. ವಿದುರ ನೀತಿಯಲ್ಲಿ ''ಧರಣಿ ನುಂಗುವಳಿಬ್ಬರನು ಸಂಗರವ ಜಯಿಸದ ನೃಪನ ದೇಶಾಂ। ತರವ ಚರಿಸದ ಪಂಡಿತನಿದು ಶಾಸ್ತ್ರಸಿದ್ಧವಲೆ'' ಎಂದಿದೆ. ವಿದ್ಯಾಪ್ರಸಾರಕ್ಕಾಗಿ ದೇಶಾಂತರ ಹೋಗುತ್ತಿದ್ದರು. ಜನ ಹೆಚ್ಚಾದಾಗ ಜೀವನಕ್ಕೆ ಕಷ್ಟವಾದಾಗ ವಲಸೆ ಹೋಗುವ ಕ್ರಮವೂ ಇತ್ತು. ಇಂಥ ಕ್ರಮ ಈಗಲೂ ಇದೆ. ಆದ್ದರಿಂದ ಈ ಕಾರಣದಿಂದಲೇ ವಲಸೆ ಬಂದರೆಂದು ಹೇಳುವುದು ಕಷ್ಟ. ''ಗಾವುಂ ಸೋಣ್ಣುವೇರಂ'' (ಊರು ಬಿಟ್ಟು ಹೋಗುತ್ತೇನೆ) ''ಖೈಂದಲ್ಲೇ ರಿಲೆ ವಚ್ಚುನು ವಂಚ್ಚರಂ'' (ಎಲ್ಲಿಗಾದರೂ ಹೋಗಿ ಬದುಕುತ್ತೇನೆ) ''ದೋಳ್ಯಾ ದೀಸನತ್ಥಿಯಲ್ಲೇ ಕಡೆ ವೇರಂ'' (ಕಣ್ಣಿಗೆ ಕಾಣಿಸದ ಕಡೆಗೆ ಹೋಗುತ್ತೇನೆ) ''ನಾಥವುನುವೇರಂ'' (ಇಲ್ಲವಾಗಿ ಹೋಗುತ್ತೇನೆ) ಇಂತಹ ಮಾತುಗಳು ಕರ್ಹಾಡದಲ್ಲಿ ಈಗಲೂ ಪ್ರಚಲಿತವಿದೆ. ಮುಖ್ಯವಾಗಿ ಊರು ಬಿಟ್ಟು ಹೋಗುವುದು ಸುಖವಾಗಿ ಬದುಕಲಿಕ್ಕೆನ್ನುವುದು ಮಾತ್ರ ಸತ್ಯ.

೨. ಮಂಗ ಮದ್ಯ ಕುಡಿದಾಗ ಅದಕ್ಕೆ ಚೇಳು ಕಚ್ಚಿ ಅದರ ಮೇಲೆ ಭೂತ ಸಂಚಾವಾದಂತಾಗಿತ್ತು ಎಂದು ಕವಿ ವರ್ಣಿಸಿದ್ದಾರೆ.

೩. ದೇವಾಸುರರು, ಮೃಗ ಪಕ್ಷಿಗಳು, ಉರಗಳು, ಗಂಧರ್ವ, ಕಿಂಪುರುಷ, ಕಿನ್ನರರು ವಿದ್ಯಾಧರರು, ವಿಷಜಂತು ಸಮೂಹಗಳು, ಮನುಷ್ಯರು – ಇವರಿಂದ ನಿನಗೆ ಮರಣವಿಲ್ಲ ಎಂದು ಹೇಳು ನನಗೆ ಎಂದು ಬ್ರಹ್ಮನಲ್ಲಿ ಹಿರಣ್ಯಕಶಿಪು ವರ ಕೇಳುತ್ತಾನೆ. ಹಸಿ, ಒಣಗಿದ ಮಹಾಯುಧಗಳಿಂದ ಮಂತ್ರಾಸ್ತ್ರ ಮಂತ್ರೌಷಧ ಮೂಲಗಳಿಂದ ಹಗಲು, ರಾತ್ರಿ, ಮನೆಯ ಒಳಗೆ, ಹೊರಗೆ ಮೃತ್ಯು, ನನಗೆ ಬಾರದಂತೆ ವರ ಕೊಡು ಎಂದು ಬ್ರಹ್ಮನಲ್ಲಿ ಕೇಳಿದಾಗ 'ತಥಾಸ್ತು' ಎಂದವನು ಬ್ರಹ್ಮ.

೪. ಹಗಲೂ ಅಲ್ಲದ ರಾತ್ರಿಯೂ ಅಲ್ಲದ ಮುಸ್ಸಂಜೆಯ ಸಮಯ

೫. ಹೊಸ್ತಿಲು ಹರಿಯ ಆವಾಸಸ್ಥಾನ. ನಿತ್ಯಪೂಜೆ ಹೊಸ್ತಿಲಿಗಿದೆ. ಅದನ್ನು ಯಾರೂ ತುಳಿಯುವುದಿಲ್ಲ. ಹೊಸ್ತಿಲ ಮೇಲೆ ಯಾರೂ ಕುಳಿತುಕೊಳ್ಳುವುದಿಲ್ಲ.

೬. ಶ್ರೀ ಪೆರ್ಲ ಕೃಷ್ಣ ಭಟ್ಟರ ಸಹಧರ್ಮಿಣಿ ಶ್ರೀಮತಿ ಕಮಲಾ ಅವರ ಕೋರಿಕೆಯ ಮೇರೆಗೆ ಈ ಶೋಭಾನೆ ಹಾಡನ್ನು ಕೃಷ್ಣ ಭಟ್ಟರು ಬರೆದುಕೊಟ್ಟಿದ್ದಾರೆ.

★ ★ ★

ಅಧ್ಯಾಯ ೬

# ಕರ್ಹಾಡ ಭಾಷಾ ಸಾಹಿತ್ಯದ ಅನನ್ಯತೆ ಜೀವನಾವರ್ತನಾಚರಣೆ, ವಾರ್ಷಿಕಾವರ್ತನಾಚರಣೆ

## ೬.೧. ಕರ್ಹಾಡ ಭಾಷಾ ಸಾಹಿತ್ಯದ ಅನನ್ಯತೆ

ಕರ್ಹಾಡರು ಯಾವಾಗ ವಲಸೆ ಬಂದರೆನ್ನುವುದಕ್ಕೆ ಸರಿಯಾದ ಆಧಾರಗಳಿಲ್ಲ ದಾಖಲೆಯಾಗಲಿ ಉಪಲಬ್ದವಿಲ್ಲ. ಕರ್ಹಾಡರ ಚರಿತ್ರೆ ಸುಮಾರು ಒಂದು ಸಾವಿರ ವರ್ಷಗಳಷ್ಟು ಹಿಂದಿನದೆಂದು ಪೂನಾದ ಭಂಡಾರ್‌ಕಾರ್‍ಸ್ ಓರಿಯಂಟಲ್ ಸಂಶೋಧನೆಯ ಪ್ರೊಫೆಸರ್ ಪಿ.ಕೆ. ಗೋಡೆಯವರು ಅಭಿಪ್ರಾಯ ಪಡುತ್ತಾರೆ. ಇಷ್ಟು ಪ್ರಾಚೀನವಾದ ಭಾಷೆಯಲ್ಲಿ ಮೌಖಿಕ ಸಾಹಿತ್ಯ ಸಾಕಷ್ಟು ದೊರೆಯುತ್ತದೆ. ಗ್ರಾಂಥಿಕ ಸಾಹಿತ್ಯ ಇದ್ದಿರಲೂ ಬಹುದು. ಕಾಸರಗೋಡಿಗೆ ವಲಸೆ ಬಂದ ಕರ್ಹಾಡರ ಬಗ್ಗೆ ಹೇಳುವುದಾದರೆ ಕರಾಡಿ ಭಾಷೆಯಲ್ಲಿ ವಿಶೇಷವಾಗಿ ಸಾಹಿತ್ಯ ರಚನೆ ಕಂಡು ಬರುವುದಿಲ್ಲ. ಲಿಪಿ ಇಲ್ಲದ ಆಡು ಭಾಷೆಯಲ್ಲಿ ದಿ। ಪಡ್ರೆ ಶ್ರೀಪತಿ ಶಾಸ್ತ್ರಿಗಳು ಮೊಟ್ಟ ಮೊದಲಿಗೆ ಸಾಹಿತ್ಯ ರಚನೆ ಮಾಡಿ, ಕರ್ಹಾಡ ಭಾಷಿಕ ಸಾಧ್ಯತೆಯ ನೆಲೆಯಲ್ಲಿ ಅನನ್ಯತೆಯನ್ನು ತೋರಿಸಿಕೊಟ್ಟಿದ್ದಾರೆ. ಕರಾಡ ಭಾಷೆಯ ಸಾಂಸ್ಕೃತಿಕ ಪದಗಳು, ಗಾದೆಗಳು, ನುಡಿಗಟ್ಟುಗಳು ಅವರ ಸಾಹಿತ್ಯ ಕೃತಿಯಲ್ಲಿ ಬಂದು ಕರಾಡ ಭಾಷೆಯ ವೈಶಿಷ್ಟ್ಯವನ್ನು ಗುರುತಿಸುವಂತಾಗಿದೆ.

ಭಾಷೆ ಕಲಿತು ಬರುವಂತಹ ಕ್ರಿಯೆ. ಮನೆಯಲ್ಲಿ ತಾಯಿ ತಂದೆ ಅಣ್ಣ ತಮ್ಮಂದಿರೊಂದಿಗೆ ಮಾತನಾಡಿ ಮಗು ಭಾಷೆಯ ಉಚ್ಚಾರವನ್ನು ಕಲಿತು ಕೊಳ್ಳುತ್ತದೆ. ಬರವಣಿಗೆಗೆ ನಿಲುಕದ ಶಬ್ದಗಳನ್ನು ಉಚ್ಚರಿಸಬೇಕಿದ್ದರೆ ಕಿವಿಯಿಂದ ಕೇಳಿಯೇ ತಿಳಿದುಕೊಳ್ಳಬೇಕು. ಉಚ್ಚಾರಣೆಯಿಂದಲೇ ಅರ್ಥ ವ್ಯತ್ಯಾಸವಾಗುವ ಎಷ್ಟೋ ಪದಗಳು ಕರಾಡ ಭಾಷೆಯಲ್ಲಿವೆ. ಇಂತಹ ಒಂದು ಭಾಷೆಯಲ್ಲಿ ಕೃತಿ ರಚನೆ ಮಾಡಬೇಕಿದ್ದರೆ ಪ್ರತಿಭೆ ಬೇಕು. ಸಂಸ್ಕೃತದಲ್ಲಿ ವಿದ್ವಾಂಸರಾದ ದಿ। ಪಡ್ರೆ ಶ್ರೀಪತಿ ಶಾಸ್ತ್ರಿಗಳ ಮೊದಲ ಪ್ರಯತ್ನದ ಫಲವಾಗಿ ಬಂದ 'ಪ್ರಹ್ಲಾದ ಚರಿತ್ರ' ಪ್ರಸಿದ್ಧವಾದ ಭಾಗವತದ ಕತೆ. ಈ ಕಥೆಯನ್ನು ಅವರು ಹರಿಕಥೆಯ ರೂಪದಲ್ಲಿ ಬರೆದಿದ್ದಾರೆ. ಹರಿಭಕ್ತಿಯ ಪಾರಮ್ಯವನ್ನು ಒತ್ತಿ ಹೇಳುವುದು ಕವಿಗೆ ಮುಖ್ಯವಾಗಿದೆ. ಕವಿ ತನ್ನ ಕೃತಿಗೆ "ಹರಿಕಥಾ ರೂಪೇನ– ಚಂಪೂಕಾವ್ಯಂ" ಎನ್ನುವ ಶೀರ್ಷಿಕೆಯನ್ನೇ ಕೊಟ್ಟಿದ್ದಾರೆ. ಪ್ರಹ್ಲಾದನ ಚರಿತ್ರೆಯನ್ನು ಕೇಳುವುದರೊಂದಿಗೆ ಶ್ರೀಹರಿಯ ವಿಜಯದ ಕಥೆಯನ್ನು ಕೇಳಿ ಮನುಷ್ಯ ಜನ್ಮ ಸಾರ್ಥಕವಾಗಬೇಕು ಎನ್ನುವ ಉದ್ದೇಶ ಇಲ್ಲಿದೆ. ಇಡೀ ಕಾವ್ಯವನ್ನು ಓದಿದಾಗ ಇದು ಮನವರಿಕೆಯಾಗುತ್ತದೆ.

ಚಂಪೂ ಪ್ರಕಾರದಲ್ಲಿ ಒಂದು ಕೃತಿಯನ್ನು ಬರೆದು ಹರಿಕಥೆಯನ್ನು ಅದರೊಳಗೆ ಮೇಳೈಸಿದ ರೀತಿಯು ಕರಾಡ ಭಾಷಾ ಸಾಹಿತ್ಯದ ಅನನ್ಯತೆಯನ್ನು ಹೇಳುತ್ತದೆ.

ಕನ್ನಡ ಚಂಪೂವಿನಲ್ಲಿ ಖ್ಯಾತ ಕರ್ನಾಟಕಗಳಿಗೆ ಮಹತ್ವದ ಸ್ಥಾನವಿದೆ. ಗದ್ಯವನ್ನು ವಿವರಣೆಯಲ್ಲಿ ಬಳಸಿದರೆ ಚಿಕ್ಕ ಭಾವಗಳನ್ನು ಹೇಳಲು ಕಂದ ಪದ್ಯಗಳು ಉಪಯೋಗವಾಗುತ್ತವೆ. 'ಹರಿಕಥಾ ರೂಪೇನ ಚಂಪೂ ಕಾವ್ಯ'ದಲ್ಲಿ ಕಂದ ಪದ್ಯಗಳ ಬಳಕೆಯಿಲ್ಲದೆ ವಿರಳವಾಗಿ ಬೆರಳೆಣಿಕೆಯಷ್ಟು ವೃತ್ತಗಳನ್ನು ಬಳಸಿ ಕೃಷ್ಣನ ಮಹಿಮೆಯನ್ನು ಸಾರಿದ್ದಾರೆ.

ಗಣಪತಿ, ಶಾರದೆಯರ ಸ್ತುತಿಯು ರಾಗ, ತಾಳ ಸಂಯೋಜನೆಯೊಂದಿಗೆ ಬಂದರೆ ಕೃಷ್ಣನ ಸ್ತುತಿಯು ವೃತ್ತದಲ್ಲಿ ಬಂದಿದೆ. ಶಾರ್ದೂಲ ವಿಕ್ರೀಡಿತದಲ್ಲಿ ಹದವಾದ ಸಂಸ್ಕೃತ ಮಿಶ್ರಿತ ಕರಾಡಿ ಭಾಷೆಯಲ್ಲಿ

ಇಷ್ಟದೇವ ಸ್ತುತಿಯು ಸಹಜವಾಗಿ ಬಂದಿದೆ. ಕನ್ನಡದೊಂದಿಗೆ ಸಂಸ್ಕೃತ ಮಿಶ್ರಣವಾಗುವ ರೀತಿಯಲ್ಲಿಯೇ ಕರಾಡಿಯೊಂದಿಗೆ ಸಂಸ್ಕೃತವು ಒಂದಾಗಿ ಭಾಷಾ ದೃಷ್ಟಿಯಿಂದಲೂ ಕರಾಡ ಸಾಹಿತ್ಯವು ಮೇಲ್ಮೆಯನ್ನು ಸಾಧಿಸಿದೆ.

ಪ್ರಹ್ಲಾದ ಚರಿತ್ರೆಯನ್ನು ಓದಿದಾಗ ಯಕ್ಷಗಾನದ ಛಾಯೆ ದಟ್ಟವಾಗಿ ವ್ಯಾಪಿಸಿರುವುದನ್ನು ಗುರುತಿಸಲು ಸಾಧ್ಯವಿದೆ. ವಿವಿಧ ರಾಗಗಳು ವಿವಿಧ ತಾಳಗಳಲ್ಲಿ ಪದ್ಯ ರಚನೆಗಳಾದುದರಿಂದ ಯಕ್ಷಗಾನ ಕೃತಿಯಾಗಿ ಪರಿವರ್ತಿಸುವ ಅವಕಾಶವು ಈ ಕೃತಿಯಲ್ಲಿರುವುದು ಕರಾಡ ಭಾಷಾ ಸಾಹಿತ್ಯದ ಅನನ್ಯತೆ ಎಂದೇ ಹೇಳಬೇಕು.

ಸುಖದ ತುದಿಗೆ ದು:ಖವಿದೆ ಎನ್ನುವುದನ್ನು ಹೇಳಲು ಕವಿಯು 'ಸರ್ಪದ ಹೆಡೆಯ ರತ್ನದಂತೆ' ಎನ್ನುವ ಉಪಮೆಯನ್ನು ಬಳಸಿದುದು ಸುಂದರವಾಗಿದೆ. ಮಗನ ಅಗಲಿಕೆಯಿಂದ ಮೂರ್ಛಿತಳಾದ ದಿತಿದೇವಿಯನ್ನು ಕಂಡು ಹಿರಣ್ಯ ಕಶಿಪು 'ಬೆಂಕಿಯನ್ನು ಸುಡಲು ಯಾರಿಂದಾದರೂ ಸಾಧ್ಯವೇ? ಎಂದು ತನ್ನನ್ನು 'ಬೆಂಕಿ' ಎಂದು ಸಂಬೋಧಿಸಿದ್ದಾನೆ. ಬೆಂಕಿಯ ಎದುರು, ನೀರಿನ ಎದುರು, ಗಾಳಿಯ ಎದುರು ಹೋರಾಡಿ ಗೆದ್ದವರೇ ಇಲ. ಇನ್ನೊಂದೆಡೆ ಶ್ರೀಹರಿಯು ಮುನಿಯ ವೇಷದಲ್ಲಿ ಗೋಚರಿಸಿ ಕಣ್ಮರೆಯಾದಾಗ ತನ್ನ ಅಸಹಾಯಕತೆಯನ್ನು ವ್ಯಕ್ತಪಡಿಸುವಲ್ಲಿ ಬಂದು ಮಾತು ಮಾರ್ಮಿಕವಾಗಿದೆ "ಮುಂದಕ್ಕೆ ನೋಡಿಕೊಳ್ಳುತ್ತೇನೆ" ಎನ್ನುವಲ್ಲಿ ಸಹಜತೆ ಇದೆ.

ಬ್ರಹ್ಮನು ಹಿರಣ್ಯ ಕಶಿಪುವಿಗೆ ಕೊಟ್ಟ ವರವನ್ನು ನೆರವೇರಿಸುವಲ್ಲಿ ಶ್ರೀ ಹರಿಯ ಪಾತ್ರ ಅದ್ಭುತವಾದುದು. ನರಸಿಂಹಾವತಾರವನ್ನು ತಾಳಿ ಹರಿಯು ಕಂಬದಿಂದ ಪ್ರತ್ಯಕ್ಷನಾಗಿ ಹೊಸ್ತಿಲಲ್ಲಿ ಕುಳಿತು ಹಿರಣ್ಯ ಕಶಿಪುವನ್ನು ತೊಡೆಯಲ್ಲಿಟ್ಟು ಸೀಳುತ್ತಾನೆ. ಅದೂ ಮುಸ್ಸಂಜೆಯ ಹೊತ್ತಿನಲ್ಲಿ. ಹೊಸ್ತಿಲ ಪೂಜೆ ನಿತ್ಯ ನಡೆಯುವ ಕ್ರಮವಾಗಿದೆ. ಶ್ರೀ ಹರಿ ಅಲ್ಲಿ ನೆಲೆಸಿದ್ದಾನೆ ಎನ್ನುವ ನಂಬಿಕೆ ಇಂದೂ ಕೂಡ ಕರಾಡದಲ್ಲಿದೆ. ಆ ನಂಬಿಕೆ ಸಾಹಿತ್ಯದಲ್ಲಿ ಕಾಣಿಸಿದೆ.

ಕರಾಡರ ಮದುವೆಯ ಕ್ರಮಗಳು 'ಗಾಂಧ್ರ' (ಶೋಭಾನೆ) ಪ್ರಕಾರದಲ್ಲಿ ಬಂದಿವೆ. 'ಗಾಂಧ್ರ ಪ್ರಕಾರವೇ ಕರಾಡ ಭಾಷಾ ಸಾಹಿತ್ಯದ ಅನನ್ಯತೆಯನ್ನು ಸಾರುತ್ತದೆ. 'ಕುರ್ಚಿ, ಮೇಜಿ, ಮಾಸ್ತು' ಮೊದಲಾದ ಪದಗಳು ಸಾಹಿತ್ಯದಲ್ಲಿ ಬಂದುದನ್ನು ಗಮನಿಸಬಹುದು.

ಸಂಸ್ಕೃತ ಭಾಷೆಯಲ್ಲಿ ಪಾಂಡಿತ್ಯವನ್ನು ಗಳಿಸಿದ ದಿ। ಶ್ರೀಪತಿ ಶಾಸ್ತ್ರಿಯವರು ಶ್ರೇಷ್ಠ ಯಕ್ಷಗಾನದ ಅರ್ಥಧಾರಿಗಳೂ ಆಗಿದ್ದರು. ಹಾಗಾಗಿ ವಸ್ತು, ಭಾಷೆ, ಶೈಲಿ, ಛಂದಸ್ಸು, ನಿರೂಪಣಾ ಕ್ರಮ – ಹೀಗೆ ಎಲ್ಲ ವಿಧದಿಂದಲೂ ಕರಾಡ ಸಾಹಿತ್ಯ ಅನನ್ಯತೆಯನ್ನು ಕಂಡು ಕೊಂಡಿದೆ.

## ೬.೨. ಜೀವನಾವರ್ತನಾಚರಣೆಗಳು, ವಾರ್ಷಿಕಾವರ್ತನಾಚರಣೆಗಳು

ಸಾಮಾನ್ಯವಾಗಿ ಎಲ್ಲ ವರ್ಗಗಳಲ್ಲೂ ಸಂಪ್ರದಾಯಗಳು, ಆಚಾರವಿಚಾರಗಳು, ರೀತಿನೀತಿಗಳು ನಂಬಿಕೆಗಳು, ಸಂಸ್ಕಾರಗಳು ಇರುತ್ತವೆ. ಕೂಡಿ ಬಾಳುವುದು ಕುಟುಂಬ. ಸಮಾಜವೊಂದರ ಕುಟುಂಬದ ಬೆಳವಣಿಗೆಯ ದೃಷ್ಟಿಯಿಂದ ಗಂಡು ಹೆಣ್ಣೆಂಬ ಸಾಂಸಾರಿಕ ಘಟಕಕ್ಕೆ ಹೆಚ್ಚಿನ ಪ್ರಾಧಾನ್ಯವಿದೆ.

ಹುಟ್ಟಿನಿಂದ ಸಾಯುವವರೆಗೆ ಅನೇಕ ಬಗೆಯ ನಂಬಿಕೆ ಮತ್ತು ಅದರ ಕ್ರಿಯಾ ರೂಪವಾದ ಆಚರಣೆಗಳು ರೂಢಿಸಿಕೊಂಡು ಬಂದಿರುತ್ತವೆ. ಬದುಕಿನ ವಿಶಿಷ್ಟ ಸಂದರ್ಭದ ಆಚರಣೆಗಳೆಂದು ಕರೆಸಿಕೊಂಡು

ನಿರ್ದಿಷ್ಟ ಕಾಲ ಘಟ್ಟದಲ್ಲಿ ಆವರ್ತನೆಗೊಳ್ಳುವುದರಿಂದ ಇವುಗಳನ್ನು ಜೀವನಾವರ್ತನದ ವಿವಿಧ ಘಟ್ಟಗಳೆಂದು ಕರೆಯುತ್ತಾರೆ.

ಹುಟ್ಟಿನಿಂದ ಮರಣದವರೆಗೆ ಬರುವ ಎಲ್ಲಾ ಸಂಸ್ಕಾರಗಳೂ ಜೀವನಾವರ್ತನದ ಘಟಕವಾಗಿರುತ್ತವೆ. ಕರ್ಹಾಡರ ಪಿತೃ ಪ್ರಧಾನ ಕುಟುಂಬ ವ್ಯವಸ್ಥೆಯಲ್ಲಿ ಗಂಡಿಗೆ ಪ್ರಾಧಾನ್ಯ. ಸಂಸ್ಕಾರಗಳೆಲ್ಲವೂ ಸ್ತ್ರೀಪುರುಷರಿಗೆ ಸಮಾನವಾಗಿರುತ್ತವೆ. ಆದರೆ ಇಂದಿನ ಸಾಮಾಜಿಕ ಪರಿವರ್ತನೆಯಿಂದಾಗಿ ಕೆಲವು ಸಂಸ್ಕಾರಗಳು ನಡೆಯುತ್ತಿಲ್ಲ.

ಕರಾಡದಲ್ಲಿ ಗಂಡು ಮಗು ಹುಟ್ಟಿದರೆ ಬೆಲ್ಲ ಮತ್ತು ಕೊಬ್ಬರಿಯ ಸಣ್ಣ ಸಣ್ಣದಾಗಿ ಕತ್ತರಿಸಿದ ಹೋಳುಗಳನ್ನು ಮಿಶ್ರಣ ಮಾಡಿ ನೆರೆಮನೆಯವರಿಗೆಲ್ಲ ಕೊಡುವುದು ವಾಡಿಕೆ. ಗಂಡುಮಗುವಾಗಿದ್ದರೆ ಹುಟ್ಟಿದಾಕ್ಷಣ ಜಾಗಟೆ ಬಾರಿಸಿ ಮನೆಯವರಿಗೆಲ್ಲ ತಿಳಿಸುವ ಸಂಪ್ರದಾಯವಿತ್ತು. ಹೆಣ್ಣು ಮಗುವಾದರೆ ಆ ಗೌಜಿ ಗದ್ದಲ ಯಾವುದೂ ಇಲ್ಲ. ಹನ್ನೊಂದನೆಯ ದಿವಸ ಶುದ್ಧವಾಗಿ 'ಪಂಚಗವ್ಯ' ಎನ್ನುವ ತೀರ್ಥವನ್ನು ಕುಡಿದರೆ ಪರಿಶುದ್ಧವಾಯಿತು. ಒಂದುವರೆ ತಿಂಗಳು ತಾಯಿ ಮಗು ಎಲ್ಲಿಗೂ ಹೋಗುವಹಾಗಿಲ್ಲ. ಬಾಣಂತನ ಕಟ್ಟುನಿಟ್ಟಿನಲ್ಲಿ ನಡೆಯುತ್ತದೆ.

ಹೆಣ್ಣು ಮೊದಲ ಬಾರಿ ಮೈನರೆತಾಗ ಆಕೆಯನ್ನು ಕರಾಡಿಯಲ್ಲಿ ' ಪ್ರಸಾಂದವುಪ' ಎನ್ನುತ್ತಾರೆ. ಬಾಲ್ಯ ವಿವಾಹ ರೂಢಿಯಲ್ಲಿದ್ದ ಕಾಲದಲ್ಲಿ ಮುಟ್ಟಾದ ಮೇಲೆ ಹೆಣ್ಣನ್ನು ಗಂಡನ ಮನೆಗೆ ಕಳುಹಿಸುವ ರೂಢಿ ಇತ್ತು. ಮೈನರೆತಾಗ ಅಕ್ಕಿ ತೆಂಗಿನ ಕಾಯಿ ಸಹಿತ ಅವಳಿದ್ದಲ್ಲಿಂದ ಯಾರಾದರಿಬ್ಬರು ಹೋಗಿ ವಿಷಯವನ್ನು ಗಂಡನ ಮನೆಗೆ ತಿಳಿಸಬೇಕು. ಹಾಗೆ ಬಂದವರಿಗೆ ಸಮ್ಮಾನ ಮಾಡಿ ಕಳುಹಿಸುವುದು ಪದ್ಧತಿ. ಇಲ್ಲಿ ಹೂ ಮುಡಿಸುವ ಶಾಸ್ತ್ರವು ಬಹುಮುಖ್ಯವಾಗಿದೆ. ಯೋಗ್ಯ ಸಂತಾನವನ್ನು ಪಡೆಯುವ ಉದ್ದೇಶದಿಂದ ಪತ್ನಿಯ ಬಲ ಮೂಗಿನಲ್ಲಿ ಅಶ್ವಗಂಧ ಇಲ್ಲವೇ ದೂರ್ವಾರಸವನ್ನು ಸುರಿಸುವ ಶಾಸ್ತ್ರವಿದೆ. ಇದನ್ನು ಕರಾಡಿ ಭಾಷೆಯಲ್ಲಿ 'ಫಳ್ಯಂತಣ' ಎನ್ನುತ್ತಾರೆ. ಈಗ ಈ ಶಾಸ್ತ್ರವನ್ನು ಮದುವೆಯ ಮರುದಿನ ಗಂಡಿನ ಮನೆಯಲ್ಲಿ ನಡೆಸುತ್ತಾರೆ.

ಸೀಮಂತಕ್ಕೆ "ಕುಂಡಾ ಕೊಡಿಮಂಗಲ" ಎನ್ನುತ್ತಾರೆ. ಹೆತ್ತವರು ಹೊದ್ಲು, ಬೆಲ್ಲ, ತೆಂಗಿನ ಕಾಯಿ; ಉಡಿ ತುಂಬಿಸಲು ಅಕ್ಕಿ ತೆಂಗಿನಕಾಯಿ, ರವಕೆ ಕಣ, ಎಲೆ ಅಡಿಕೆ, ಹೂಗಳನ್ನು ತೆಗೆದುಕೊಂಡು ಕೊಂಬುವಾದ್ಯದ ಮೂಲಕ ಮಗಳ ಮನೆಗೆ ದಿಬ್ಬಣದಂತೆ ಹೋಗುವ ವಾಡಿಕೆಯಿದೆ. ಅಲ್ಲಿ ನೆರೆದವರಿಗೆಲ್ಲ ಬೆಲ್ಲ ಕಲಸಿದ ಹೊದಳನ್ನು ಊಟದ ಸಮಯದಲ್ಲಿ ಬಡಿಸುತ್ತಾರೆ. ಮನೆಗೆ ಕೊಂಡು ಹೋಗಲೂ ಕೊಡುವ ಕ್ರಮ ಇದೆ. ಸೀಮಂತದ ಬಗ್ಗೆ ಕಲಸಿದ ಹೊದಳಿಗೆ ಮಾತ್ರ "ಕುಂಡೊ" ಎಂದು ಹೆಸರು ಉಳಿದ ದಿನಗಳಲ್ಲಿ ಅದನ್ನು 'ಪನಿವಾರು' 'ಪಂಚಕಜ್ಜಾಯೊ' ಎಂದು ಹೇಳುತ್ತಾರೆ.

ಜಾತಕರ್ಮದ ಸಮಯದಲ್ಲಿ ಮಗುವನ್ನು ದೇವರ ಪ್ರತೀಕವೆಂಬ ನಂಬಿಕೆಯಿಂದ ಜನ್ಮ ಸಂಬಂಧವಾದ ಕರ್ಮವನ್ನು ಮಾಡುತ್ತಾರೆ. ಜೇನು, ತುಪ್ಪ, ಚಿನ್ನದ ಮಿಶ್ರಣವನ್ನು ಕುಡಿಸಬೇಕಾದುದು ಇಲ್ಲಿ ಪ್ರಧಾನ ವಿಚಾರ. ಮಗುವಿನ ಆರೋಗ್ಯದ ದೃಷ್ಟಿಯಿಂದ ಈ ಮಿಶ್ರಣವನ್ನು ಕುಡಿಸುತ್ತಾರೆ.

ಹೆಣ್ಣಾಗಲಿ, ಗಂಡಾಗಲಿ ಮಗು ಹುಟ್ಟಿ ಐದನೆಯ ಯಾ ಆರನೆಯ ದಿನ ಸಾಟು ಮಾಡುತ್ತಾರೆ. 'ಷಷ್ಠಿ' ಯ ಅಪಭ್ರಂಶರೂಪವೇ ಸಾಟು. ಗಣಪತಿಯನ್ನು ಪೂಜಿಸುವ ಮೊದಲು ಷಷ್ಠಿ ದೇವಿಯ ಆರಾಧನೆಯನ್ನು ಮಾಡುತ್ತಾರೆ.

ನಾಮಕರಣವು ಗಂಡಾದರೆ ಹನ್ನೊಂದನೆಯ ದಿನ, ಹೆಣ್ಣಾದರೆ ಹನ್ನೆರಡನೆಯ ದಿನ ಮಾಡುತ್ತಾರೆ. ಅನ್ನ ಪ್ರಾಶನ, ಚೌಲ, ಕಿವಿಚುಚ್ಚುವುದು, ವಿದ್ಯಾರಂಭ, ಉಪನಯನ ಸಮಾವರ್ತನ ವಿವಾಹ ಇವೆಲ್ಲ ಜೀವನಾವರ್ತನಾಚರಣೆಗಳಲ್ಲಿ ನಡೆಯುತ್ತವೆ.

ಕರಾಡದಲ್ಲಿ ಮದುವೆಯನ್ನು 'ಹರ್ಡಿಕ' ಸೊಯಿರಿಕ ಕರಪ, ಏಕು ತಂಬ್ಯೊ ಉದೊರಿಕ್ಯೊಪ ಎಂದು ಹೇಳುತ್ತಾರೆ. ಮದುವೆಯ ನಾಲ್ಕನೆಯ ದಿನ ವರನ ತಂದೆ ತಾಯಿಗೆ ವಧುವನ್ನು ಒಪ್ಪಿಸಿಕೊಡುವುದಕ್ಕೆ ಕರಾಡಿಯಲ್ಲಿ 'ಕನ್ನೆಪ್ಪಪ'', ''ಕನ್ನೆಪ್ಪುಂದೆವುಪ'' ಎಂದು ಹೇಳುತ್ತಾರೆ.

ಯಾವುದೇ ಸಮಾರಂಭ ನಡೆಯುವಾಗಲೂ ಗೋಗ್ರಾಸ ಕೊಡುವ ಕ್ರಮ ಕರಾಡರಲ್ಲಿದೆ. ಗೋವಿಗೆ ಕೊಡುವ ಅನ್ನದ ಗ್ರಾಸವೇ ಗೋಗ್ರಾಸು. ಬ್ರಾಹ್ಮಣ ಸಂತರ್ಪಣೆ ನಡೆಯುವ ಹೊತ್ತಿಗೆ ಈ ಗೋಗ್ರಾಸ ಗೋವಿನ ಹೊಟ್ಟೆಗೂ ಹೋಗಬೇಕು. ಹಾಗಾಗಿ ಗೋಗ್ರಾಸವನ್ನು ದನಕ್ಕೆ ಕೊಡುವ ವಾಡಿಕೆ ಇದೆ.

ಭೋಜನದ ಸಮಯದಲ್ಲಿ ಪಾಯಸವನ್ನು ಭಕ್ಷ್ಯ ಭೋಜ್ಯಗಳನ್ನು ಬಡಿಸುವ ಸಂದರ್ಭದಲ್ಲಿ ಶ್ಲೋಕಗಳನ್ನು ಹೇಳುವ ಸಂಪ್ರದಾಯ ಕರಾಡರಲ್ಲಿದೆ. ಸಂತೃಪ್ತಿಯಿಂದ ಊಟ ಮಾಡುವಾಗ ''ಹರಿ ಭೋಜನ ಕಾಲೇ ನಮ: ಪಾರ್ವತಿ ಪತೇ ಹರಹರಾ'' ಎಂದು ಶ್ಲೋಕ ಹೇಳಿದವರ ಪರವಾಗಿ ಹೇಳುವಾಗ ಊಟ ಮಾಡುವವರು 'ಮಹಾದೇವ' ಎಂದು ಜೊತೆಯಲ್ಲಿ ಹೇಳುತ್ತಾರೆ. ಹೀಗೆ ಆಸಕ್ತಿ ಇರುವವರು ಶ್ಲೋಕಗಳನ್ನು ಹೇಳುತ್ತಾರೆ. ಕೊನೆಯ ಶ್ಲೋಕದಲ್ಲಿ ಊಟದ ಮುಕ್ತಾಯ ಹಂತ ತಲುಪುವಾಗ 'ಗೋವಿಂದ' ನನ್ನು ಸ್ಮರಿಸಿ ಎಲ್ಲರೂ ಒಟ್ಟಿಗೆ ಏಳುವ ಕ್ರಮ ಇಂದೂ ಇದೆ.

ಅದೇ ರೀತಿ ವಾರ್ಷಿಕಾವರ್ತನಾಚರಣೆಗಳೂ ಕಂಡು ಬರುತ್ತವೆ. ಚೈತ್ರ ಮಾಸದ ಶುದ್ಧ ತೃತೀಯದಂದು ಗೌರಿಯ ಪೂಜೆ ನಡೆಯುತ್ತದೆ. ಆ ದಿನ ದ್ವಿದಳ ಧಾನ್ಯಗಳನ್ನು ಮೊಳಕೆ ಬರಲು ಬೀಜ ಹಾಕುತ್ತಾರೆ. ಆ ಬೀಜಗಳು ಚೆನ್ನಾಗಿ ಮೊಳಕೆ ಬಂದರೆ ಆ ವರ್ಷ ಉತ್ತಮ ಫಲ ಬರುತ್ತದೆ ಎನ್ನುವ ನಂಬಿಕೆಯಿದೆ. ಒಂದು ತಿಂಗಳು ಗೌರಿಗೆ ಪೂಜೆ ನಡೆಯುತ್ತದೆ. ಮಂಗಳವಾರ ಶುಕ್ರವಾರ ವಿಶೇಷ ಪೂಜೆ ಇದೆ. ಆ ದಿನ ಮುತ್ತೈದೆಯರಿಗೆ ಬಾಗಿನ ಕೊಡುವ ಕ್ರಮವಿದೆ. ಅಕ್ಷತೃತೀಯಕ್ಕೆ ಗೌರಿಯನ್ನು ವಿಸರ್ಜಿಸುತ್ತಾರೆ. ಸಂತಾನ ಪ್ರಾಪ್ತಿ, ಸುಖ ಸಮೃದ್ಧಿಗಾಗಿ ಮಾಡುವ ಪೂಜೆ ಇದಾಗಿದೆ.

ಜೀವನಾವರ್ತನಾಚರಣೆಗೆ ಸಂಬಂಧಪಟ್ಟ ಹಾಗೆ ಕರಾಡರಿಗೆ ಮಾತ್ರ ವಿಶಿಷ್ಟವಾದ ಆಚರಣೆಗಳು ಹಲವು ಇವೆ. ವಾರ್ಷಿಕಾವರ್ತನಾಚರಣೆಗಳಲ್ಲಿ ಗೌರಿಯ ಆರಾಧನೆ ಸಮೃದ್ಧಿಯ ಸಂಕೇತವೇ ಆಗಿದೆ.



ಅಧ್ಯಾಯ ೭

# ಅಧ್ಯಯನದ ಫಲಿತ

ಇಂಡೋ ಆರ್ಯನ್ ವರ್ಗಕ್ಕೆ ಸೇರಿದ ಕರ್ಹಾಡಿ ಭಾಷೆಯು ಸಂಸ್ಕೃತ ಪ್ರಾಕೃತ ಜನ್ಯವಾಗಿದ್ದು ಕೊಂಕಣಿ ಮರಾಠಿಗಿಂತ ತೀರ ಭಿನ್ನವಾದ ಸ್ವತಂತ್ರ ಭಾಷೆಯಾಗಿದೆ. ಪ್ರಾಕೃತದ ಶೌರಸೇನಿಯಿಂದ ಕೊಂಕಣಿ ಹುಟ್ಟಿತೆಂದು ಹೇಳುತ್ತಾರೆ. ಹಾಗೆಯೇ ಕರ್ಹಾಡಿಯೂ ಶೌರಸೇನಿಯಿಂದಲೇ ಹುಟ್ಟಿದ ಇನ್ನೊಂದು ಕವಲಾಗಿದೆ.

ಕರ್ಹಾಡಿಗೂ ಮರಾಠಿಗೂ ಯಾವುದೇ ಸಂಬಂಧವಿಲ್ಲ. ಕರ್ಹಾಡಿಯ ಶಬ್ದಗಳು ಸಂಸ್ಕೃತದಿಂದ ಸರಿಯಾಗಿ ತದ್ಭವಗೊಂಡಿವೆ. ಕರ್ಹಾಡಿ, ಕೊಂಕಣಿ, ಮರಾಠಿ ಇವೆಲ್ಲ ಸಹೋದರಿ ಭಾಷೆಗಳು. ಕರ್ಹಾಡಿಯು ಸಂಸ್ಕೃತ ವರ್ಣಮಾಲೆಯನ್ನು ಅನುಸರಿಸುತ್ತಿದ್ದು ಒಟ್ಟು ೪೯ ಅಕ್ಷರಗಳಿವೆ. ಸಂಸ್ಕೃತಕ್ಕೆ ಕರ್ಹಾಡಿ ಋಣಿಯಾಗಿದೆ.

ಕರ್ಹಾಡಿಯು ಸಂಸ್ಕೃತ, ಪ್ರಾಕೃತಗಳನ್ನು ಉಳಿಸಿಕೊಂಡಿದೆ. ಕರ್ಹಾಡಿ ಭಾಷೆಯ ಸರ್ವನಾಮಗಳು ಬೇರೆಯೇ ಆಗಿವೆ. ವಚನ ವ್ಯವಸ್ಥೆಯಲ್ಲಿ ಕರ್ಹಾಡಿಯು ಪ್ರಾಕೃತವನ್ನೇ ಅನುಸರಿಸಿದೆ. ಮೂಲ ಶಬ್ದವಾದ ಸಂಸ್ಕೃತವು ಯಾವ ಲಿಂಗದಲ್ಲಿದೆಯೋ ಅದು ತದ್ಭವಗೊಂಡಾಗ ಅದೇ ಲಿಂಗವಿರುವುದು ಕರ್ಹಾಡಿಯಲ್ಲಿ ಮಾತ್ರ. ಇದು ಕರ್ಹಾಡಿಯ ವೈಶಿಷ್ಟ್ಯವಾಗಿದೆ.

ಸುಮಾರು ೪೫೦ ವರ್ಷಗಳ ಹಿಂದೆ ಮಹಾರಾಷ್ಟ್ರದ ಕರ್ಹಾಡದದಿಂದ ಬ್ರಾಹ್ಮಣ ಪಂಗಡ ಒಂದು ಕೊಂಕಣಕ್ಕೆ ಬಂದ ಕಾರಣ ಕೊಂಕಣದವರು ಅವರನ್ನು ಕರ್ಹಾಡರೆಂದು ಕರೆದರು. ಕರ್ಹಾಡಲ್ಲೇ ಇದ್ದವರನ್ನು ಪದ್ಯರೆಂದು ಕರೆಯುತ್ತಾರೆ. ಕಾಸರಗೋಡಿನ ಕರ್ಹಾಡರು ಗೋದಾವರೀ ತೀರದಿಂದ ಗೋವಾದ ಮೂಲಕ ಬರುವಾಗ ಸಾರಸ್ವತರ ಜೊತೆ ಬಂದವರಾಗಿರಬೇಕು. ಗೋವಾದಿಂದ ವಲಸೆ ಬರುವಾಗ ಎಲ್ಲಾ ಕರ್ಹಾಡರೂ ಒಟ್ಟಿಗೆ ವಲಸೆ ಬರದೆ ಹಂತ ಹಂತವಾಗಿ ಬಂದಿರಬೇಕು. ಕಾಸರಗೋಡಿನ ಕರ್ಹಾಡರು ಮೊದಲು ವಲಸೆ ಬಂದವರಾಗಿರಬೇಕು. ಸುಮಾರು ೪೫೦ ವರ್ಷಗಳ ದ್ರಾವಿಡ ಸಂಪರ್ಕದಿಂದ ಕರ್ಹಾಡರ ಸಂಸ್ಕೃತಿ, ಭಾಷೆ ಬದಲಾವಣೆಗೆ ಒಳಗಾಗಿದೆ. ಗೋವಾದಿಂದ ವಲಸೆ ಬಂದರೂ ಕಾಸರಗೋಡಿನ ಕರ್ಹಾಡರು ಭಾಷೆಯನ್ನು ಉಳಿಸಿಕೊಂಡಿದ್ದಾರೆ. ಕರ್ನಾಟಕದ ಉಳಿದ ಭಾಗಗಳಿಗೆ ವಲಸೆ ಬಂದವರ ಭಾಷೆಯು ಗೋವಾದ ಮರಾಠಿ ಭಾಷೆಗೆ ಹತ್ತಿರವಾದ ಭಾಷೆಯಾಗಿದೆ.

ಕರ್ಹಾಡಿ ಭಾಷೆಯಲ್ಲಿ ಜಾನಪದ ಸಾಹಿತ್ಯವು ಹೆಚ್ಚಿಗೆ ಇಲ್ಲ. ದೊರೆತ ಸಾಹಿತ್ಯದಲ್ಲಿ ಸ್ವತಂತ್ರವಾದವುಗಳು ಯಾವುದು ಎಂದು ಗುರುತಿಸಲು ಅಸಾಧ್ಯ. ಗಾದೆ, ಒಗಟು, ಕತೆಗಳಲ್ಲಿ ಕನ್ನಡ, ತುಳು, ಮಲೆಯಾಳಗಳಿಂದ ಪ್ರಭಾವಿತವಾಗಿರಬಹುದಾದ ಸಾಧ್ಯತೆಯನ್ನು ಅಲ್ಲಗಳೆಯುವಂತಿಲ್ಲ. ಇವು ಮೂಲದಲ್ಲಿದಂತೆ ಕೆಲವಾದರೂ ಬಳಕೆಯಾಗಿರಬಹುದು. ಮೌಖಿಕ ಸಾಹಿತ್ಯವು ಅರ್ಥವಂತಿಕೆಯಿಂದ ಕೂಡಿ ಕರ್ಹಾಡ ಸಂಸ್ಕೃತಿಯ ಭಾಗವಾಗಿ ಬಂದಿದೆ.

ಕರ್ಹಾಡ ಭಾಷೆಯಲಿ ಸಾಹಿತ್ಯ ರಚನೆ ಸಾಧ್ಯ. ಚುಟುಕುಗಳು, ಕತೆಗಳು, ಹನಿಗವನಗಳು, ನಾಟಕಗಳು ಕನ್ನಡ ಲಿಪಿಯಲ್ಲಿ ಕರ್ಹಾಡ ಭಾಷೆಯಲ್ಲಿ ರಚನೆಯಾಗುತ್ತಿದೆ.

ಕರ್ಹಾಡ ಭಾಷೆಯಲ್ಲಿ ಪ್ರಾಚೀನ ಲಿಖಿತ ಸಾಹಿತ್ಯವು ಉಪಲಬ್ಧವಿಲ್ಲ. ಆದುದರಿಂದ ಅನ್ಯಭಾಷಾ ಪ್ರಭಾವವನ್ನು ಅಧ್ಯಯನ ಮಾಡಲು ಅಸಾಧ್ಯವಾಗಿದೆ. ಕರ್ಹಾಡ ಭಾಷೆಯಲ್ಲಿ ಸಾಹಿತ್ಯ ರಚನೆಯು ಸ್ವಾತಂತ್ರ ಪೂರ್ವದಲ್ಲಿ ಕರ್ಹಾಡಿ ಸಂಸ್ಕೃತ ಮಿಶ್ರಣದಿಂದ ಸಾಹಿತ್ಯದ ಭಾಷೆಯು ಸಹಜವೆನ್ನುವಂತಿದೆ. ಯಕ್ಷಗಾನದ ಪ್ರಭಾವ ಸಾಹಿತ್ಯ ಕೃತಿಯ ಮೇಲಾದಂತೆ ಭಾಸವಾಗುತ್ತದೆ.

* * *

# ಅನುಬಂಧ

೧. ಸಂಶೋಧನಾ ಸಹಭಾಗಿಗಳ/ವಕ್ತೃಗಳ ವಿವರ

೨. ಪರಮರ್ಶನ ಗ್ರಂಥಗಳು

೩. ಗಾದೆಗಳು

೪. ಒಗಟುಗಳು

೫. ಶಿಶು ಗೀತೆಗಳು

೬. ಚುಟುಕುಗಳು

೭. ಕಾಸರಗೋಡು ಜಿಲ್ಲೆಯ ನಕ್ಷೆ

## ೧ ಸಂಶೋಧನ ಸಹಭಾಗಿಗಳ/ವಕ್ತೃಗಳ ವಿವರ

1. ಅಚ್ಯುತ ಭಟ್– 78 ವರ್ಷ– ಪುರೋಹಿತರು ಕರ್ಪಾಡಸ್ಥರು ಗೋಸಾಟ ಮನೆ– ಮೂವ್ವಾರು ಪೋಸ್ಟ್ ಕಾಸರಗೋಡು ತಾಲೂಕು.
2. ಕಮಲ– 70 ವರ್ಷ– ಬಳಕ್ಕ ಮನೆ–ಪೋಸ್ಟ್ ಮುಳ್ಳೇರಿಯಾ ಕಾಸರಗೋಡು ತಾಲೂಕು.
3. ಗೋದಾವರಿ ಅಮ್ಮ– 82 ವರ್ಷ, ತೈರೆ ಮನೆ ಕಾಸರಗೋಡು ತಾಲೂಕು.
4. ಮಾಧವ ಭಟ್ಟ ಕೊಟ್ಟಂಗಳಿ– 58 ವರ್ಷ ಕಾರಡ್ಕ ಪೋಸ್ಟ್ ಕಾಸರಗೋಡು.
5. ಮಾಧವ ಭಟ್ಟ ಬಳ್ಳಪದವು–78 ವರ್ಷ ಕುಮ್ಬ್ಡಾಜೆ ಪೋಸ್ಟ್.
6. ಶಾರದ–72 ವರ್ಷ– 8ನೇ ತರಗತಿ, ಕರ್ಪಾಡ ಜಾತಿ ಬಳಕ್ಕ ಮನೆ , ಮುಳ್ಳೇರಿಯಾ–ಕಾಸರಗೋಡು ತಾಲೂಕು.
7. ಸೀತಾರಾಮ ಭಟ್ಟ ಆಟಿಕುಕ್ಕೆ– 75 ವರ್ಷ– ಆಟಿಕುಕ್ಕೆ ಮನೆ–ಬಾಯರು ಕಾಸರಗೋಡು.
8. ಸೀತಾರಾಮ ಭಟ್ಟ ಏಳುವರೆಗುಳಿ- 80 ವರ್ಷ.
9. ಸೌಭದ್ರಕ್ಕಾ–75 ವರ್ಷ– ಕಾವತೆ ಮನೆ ಪೋಸ್ಟ್ ಬಾಯಾರು– ಕಾಸರಗೋಡು ತಾಲೂಕು.
10. ಸುನೀತಾ ನೇರಳೆಕಟ್ಟೆ– 3ನೇ ಕ್ಲಾಸ್ 75 ವರ್ಷ ಪೋಸ್ಟ್ ನೇರಳೆಕಟ್ಟೆ.

# ೨. ಪರಾಮರ್ಶನ ಗ್ರಂಥಗಳು


೧. ಅಶ್ವಿನಿ. ಕೆ. ೨೦೦೭ ಕರಾಡ ಸಾಹಿತ್ಯ (ಅಪ್ರಕಟಿತ)

೨. ಎಚ್ಚೆಸ್ಕೆ (ಸಂ) ಅವಲೋಕನ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ನೃಪತುಂಗ ರಸ್ತೆ, ಬೆಂಗಳೂರು೨.

೩. ಕರ್ಹಾಡ ಸ್ಮರಣ ಸಂಚಿಕೆ ೧೯೮೬ ದಶಮಾನೋತ್ಸವ ಸಮಿತಿ, ಕರ್ಹಾಡ ಬ್ರಾಹ್ಮಣ ಅಭ್ಯುದಯ ಸಂಘ (ರಿ) ಅಗಲ್ಪಾಡಿ.

೪. ಕರ್ಹಾಡ ರಜತ ೨೦೦೧ – ಕರ್ಹಾಡ ಬ್ರಾಹ್ಮಣ ಅಭ್ಯುದಯ ಸಂಘ (ರಿ) ಅಗಲ್ಪಾಡಿ.

೫. ಕರ್ಹಾಡ ಸೌಹಾರ್ದ ಸಂದೇಶ ೧೯೯೯ ಪ್ರಕಾಶಕರು: ಕರ್ಹಾಡ ಬ್ರಾಹ್ಮಣ ಅಭ್ಯುದಯ ಸಂಘ (ರಿ), ಶ್ರೀ ಶಂಕರ ಸದನ, ಪೆರ್ಲ, ಕಾಸರಗೋಡು.

೬. ಕರ್ಹಾಡ ವಿಶೇಷಾಂಕ ೨೦೦೩ ಕರ್ಹಾಡ ಕಲಾ ಸಾಹಿತ್ಯ ಪ್ರತಿಷ್ಠಾನ (ರಿ), ಪೆರ್ಲ.

೭. ಕೃಷ್ಣಭಟ್ ಅಡ್ಯನಡ್ಕ (ಸಂ) ೧೯೭೭ – ಸುದರ್ಶನ: ಮೂಲ್ಕಿ: ಟಿ.ಎಂ.ಎ. ಪೈ. ಅಭಿನಂದನಾ ಗ್ರಂಥ ಸಮಿತಿ.

೮. ಕೃಷ್ಣ ಪರಮೇಶ್ವರ ಭಟ್ಟ ೧೯೭೨, ಉಪಭಾಷೆ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೯. ಗಾಯತ್ರಿ ನಾವಡ (ಸಂ) ೧೯೯೩, ತೇರು, ದಕ್ಷಿಣ ಕನ್ನಡ ಜಿಲ್ಲಾ ಆರನೆಯ ಕನ್ನಡ ಸಾಹಿತ್ಯ ಸಮ್ಮೇಳನ.

೧೦. ಗುರುರಾಜ ಭಟ್ ೧೯೬೩, ತುಳುನಾಡು, ಪ್ರಕಾಶಕರು: ಕೆ. ಲಕ್ಷ್ಮೀನಾರಾಯಣ ಭಟ್.

೧೧. ಜವರೇ ಗೌಡ. ದೇ. ೧೯೭೬, ಜಾನಪದ ಅಧ್ಯಯನ, ಡಿ.ವಿ.ಕೆ. ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು೪.

೧೨. ಜೋಶಿ ಶಂ. ಬಾ ೧೯೬೩, ಕನ್ನಡ ನೆಲೆ, ಪ್ರಕಾಶಕರು : ಸಮಾಜ ಪುಸ್ತಕಾಲಯ, ಧಾರವಾಡ.

೧೩. ಜೋಶಿ ಶಂ. ಬಾ ೧೯೯೭, ಹಾಲು ಮತ ಪ್ರದರ್ಶನ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ಕಮಲಾಪುರ.

೧೪. ಕೃಷ್ಣಯ್ಯ ಎಂ. ಎಚ್. ೧೯೯೩, ಸಂಕ್ಷಿಪ್ತ ಕನ್ನಡ ಭಾಷೆಯ ಚರಿತ್ರೆ, ಸುವಿದ್ಯಾ ಪ್ರಕಾಶನ, ೯, ಡಾ। ಎ. ಆರ್. ಕೃಷ್ಣಶಾಸ್ತ್ರೀ ರಸ್ತೆ, ಬಸವನಗುಡಿ, ಬೆಂಗಳೂರು–೦೪.

೧೫. ಧಾರವಾಡಕರ ರಾ.ಯ. ೧೯೯೦, ಕನ್ನಡ ಭಾಷಾ ಶಾಸ್ತ್ರ, ಗೀತಾ ಬುಕ್ ಹೌಸ್, ಪ್ರಕಾಶಕರು: ಮೈಸೂರು.

೧೬. ನಾರಾಯಣ. ಕೆ.ವಿ. ೧೯೯೮, ದ್ವಿಭಾಷಿಕತೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೭. ನಾಯಕ. ಎಸ್. ಎಂ. ೧೯೭೬, ಕನ್ನಡ ಗಾದೆ ಮಾತುಗಳು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೧೮. ನಾರಾಯಣ. ಕೆ.ವಿ. ೧೯೯೭, ಬೇರು ಕಾಂಡ ಚಿಗುರು, ವಿವೇಕ ಪ್ರಕಾಶನ, ವಿಚಾರ ವೇದಿಕೆ, ಕರ್ನಾಟಕ, ೪೨೬, ೧೪ನೇ ಮುಖ್ಯರಸ್ತೆ, ಲಕ್ಕಸಂದ್ರ ಬಡಾವಣೆ, ಬೆಂಗಳೂರು–೨೦.

೧೯. ಪುಟ್ಟಪ್ಪ. ಕೆ.ವಿ. (ಸಂ), ೧೯೮೮, ಕನ್ನಡ ಕೈಪಿಡಿ, ಸಂಪುಟ–೧.

೨೦. ಜೋಶಿ, ಶಂ ಬಾ, ೧೯೮೧, ಕಂ ನುಡಿಯ ಹುಟ್ಟು, ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜ ಪೇಟೆ,ಬೆಂಗಳೂರು೧೮.

೨೧. ಮಯ್ಯಪಾನ ೧೯೮೮೪, ಕೋಟ ಪ್ರದೇಶದ ದೇವ ಹಾಗೂ ದೈವಸ್ಥಾನಗಳು ಒಂದು ಸಾಂಸ್ಕೃತಿಕ ಅಧ್ಯಯನ (ಅಪ್ರಕಟಿತ ಕೃತಿ) ಬೆಂಗಳೂರು ವಿಶ್ವವಿದ್ಯಾಲಯ ಕನ್ನಡ ಅಧ್ಯಯನ ಕೇಂದ್ರಕ್ಕೆ ಎಂ.ಫಿಲ್. ಪದವಿಗಾಗಿ ಅರ್ಪಿಸಿದ ಪ್ರೌಢ ಪ್ರಬಂಧ.

೨೨. ಮಯ್ಯಪಾನ ೧೯೯೫, ಕೋಟದವರು: ಕೋಟ ಪ್ರದೇಶದ ಸಾಂಸ್ಕೃತಿಕ ಅಧ್ಯಯನ ಪಾರಂಪಳ್ಳಿ ಪ್ರಕಾಶನ, ಮಂಗಳೂರು.

೨೩. ಮುಗುಳಿ. ರಂ. ಶ್ರೀ. ೧೯೯೦, ಕನ್ನಡ ಸಾಹಿತ್ಯ ಚರಿತ್ರೆ, ಗೀತಾ ಬುಕ್ ಹೌಸ್, ಪ್ರಕಾಶಕರು: ಮೈಸೂರು.

೨೪. ಮರಿಯಪ್ಪ ಭಟ್. ಎಂ., ವೆಂಕಟರಾವ್. ಎನ್. ಸೇತುಪಿಳ್ಳೆ. ಆರ್.ಪಿ., ನಾಯಕ್. ಕೆ. ಎನ್.(ಸಂ), ನಾಲ್ನುಡಿ, ನಾಣ್ನುಡಿ, ಪ್ರಕಾಶಕರು: ತಳುಕಿನ ವೆಂಕಣ್ಣಯ್ಯನವರ ಸ್ಮಾರಕ ಗ್ರಂಥಮನೆ, ಮೈಸೂರು.

೨೫. ಮುಕುಂದ ಪ್ರಭು ಎಂ. (ಪ್ರ.ಸಂ), ಪೊಲಿ, ಪ್ರಕಾಶಕರು, ಜಿಲ್ಲಾಧಿಕಾರಿ, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು–೦೧.

೨೬. ಕಾವ್ಯಪ್ರೇಮಿ, ಜನಪ್ರಿಯ ಗಾದೆಗಳ ನಿಘಂಟು.

೨೭. ಬೈರಪ್ಪ ಎಸ್.ಎಲ್. ಸಾಹಿತ್ಯ ಮತ್ತು ಪ್ರತೀಕ, ಸಾಹಿತ್ಯ ಭಂಡಾರ, ಜಂಗಮ ಮೇಸ್ತ್ರಿಗಲ್ಲಿ ಬಳೇಪೇಟೆ, ಬೆಂಗಳೂರು–೫೩.

೨೮. ಚಂದ್ರಶೇಖರ. ಕೆ. ವಿದ್ವಾನ್, ಜನಪದ ಗಾದೆಗಳು, ಪ್ರಕಾಶಕರು: ಮೆ॥ ಟಿ. ನಾರಾಯಣ ಐಯ್ಯಂಗಾರ್, ಬಳೇಪೇಟೆ, ಬೆಂಗಳೂರು–೫೩.

೨೯. ಗಣಪತಿ ರಾವ್ ಐಗಳ್.ಎಂ., (ಸಂ) ವಿಷ್ಣುಭಟ್ಟ ಪಾದೆಕಲ್ಲು ೨೦೦೪ ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ, ರಾಷ್ಟ್ರಕವಿ ಗೋವಿಂದ ಪೈ, ಸಂಶೋಧನ ಕೇಂದ್ರ, ಎಂ.ಜಿ.ಎಂ. ಕಾಲೇಜು, ಉಡುಪಿ.

೩೦. ರಾಮಚಂದ್ರ ರಾವ್. ಬಿ. ೧೯೯೮, ಕನ್ನಡ ಭಾಷೆಯ ಇತಿಹಾಸ, ಡಿ.ವಿ.ಕೆ. ಮೂರ್ತಿ, ಪ್ರಕಾಶಕರು: ಮೈಸೂರು–೪,

೩೧. ರಾಮಭಟ್ಟ, ಉಪಂಗಳ ೧೯೯೪, ಗಡಿನಾಡು ಕಾಸರಗೋಡು, ಪ್ರಕಾಶಕರು ಅಲಂಕಾರ ಪ್ರಕಾಶನ ಉಡುಪಿ ಮತ್ತು ಭಾರದ್ವಾಜ ಪ್ರಕಾಶನ, ಮಂಗಳೂರು.

೩೨. ರಾಮಚಂದ್ರಪ್ಪ ಬರಗೂರು, ಸಂಸ್ಕೃತಿ ಮತ್ತು ಸೃಜನಶೀಲತೆ, ಜನಸ್ನೇಹ ಪ್ರಕಾಶನ, ಆರ್.ಪಿಸಿ. ಲೇ ಔಟ್, ವಿಜಯನಗರ, ಬೆಂಗಳೂರು–೪೦.

೩೩. ಲಕ್ಕಪ್ಪಗೌಡ ಎಚ್.ಜೆ. , ಒಗಟುಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ.

೩೪. ವಿವೇಕ ರೈ. ಬಿ.ಎ., ತುಳುಗಾದೆಗಳು, ಪಲಚಂವಿ ಪ್ರಕಾಷನ, ಮಂಗಳೂರು–೩

೩೫. ವಿವೇಕ ರೈ. ಬಿ.ಎ., (ಪ್ರ.ಸಂ.)೧೯೯೭, ಪೊನ್ನಕಂಠಿ, ಅಖಿಲ ಭಾರತ ೬೬ನೇಯ ಕನ್ನಡ ಸಾಹಿತ್ಯ ಸಮ್ಮೇಳನ, ಮಂಗಳೂರು ೧೯೯೭.

೩೬. ವಿವಿಧ ಲೇಖಕರು, ಜನಪದ ಸಾಹಿತ್ಯ, ಕನ್ನಡ ಸಾಹಿತ್ಯ ಪರಿಷತ್ತು, ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು–೧೮.

೩೭. ಸದಾಶಿವ ಭಟ್ಟ. ಡಿ., ೨೦೦೭, ಕರ್ಹಾಡ ಬ್ರಾಹ್ಮಣರು, ಒಂದು ಅಧ್ಯಯನ, ಪ್ರಕಾಶಕರು: ಕರ್ಹಾಡ ಬ್ರಾಹ್ಮಣ ಸಮಾಜ, ಸುಳ್ಯ (ರಿ) ಕುಮಾರ ನಿಲಯ ಅಂಚೆ, ಗುತ್ತಿಗಾರು, ಸುಳ್ಯ, ದ.ಕ..

೩೮. (ಶ್ರೀಮತಿ) ಶ್ರೀರಾಮ ಹರ್ಲೇಕರ ೧೯೯೭, ಕರ್ಹಾಡ ಬ್ರಾಹ್ಮಣರು (ಡಿ. ವಿ.ವಾ. ಆರತಿ), ಕರ್ಹಾಡ ಬ್ರಾಹ್ಮಣ ಸಂಘ, ಹುಬ್ಬಳ್ಳಿ.

೩೯. ಸುರೇಶ್ ಶಿರಂತಡ್ಕ ೨೦೦೧, ಬಾಡ್ಪುನು ಪುಲ್ಲಲಂಪೂಲ (ಅಪ್ರಕಟಿತ ನಾಟಕ), ಅಹಲ್ಯೆ (ಅಪ್ರಕಟಿತ ನಾಟಕ), ಉತ್ಪಾಡು (ಅಪ್ರಕಟಿತ ನಾಟಕ).

೪೦. ಪ್ರಭು ಎಂ.ಎಂ. ೧೯೭೧ ಇತಿಹಾಸ ಯಥಾರ್ಥತೆ: ಒಂದು ವಿವೇಚನೆ.

೪೧. ಸದಾಶಿವ ಭಟ್ಟ. ಡಿ. ೧೯೯೭, ಅಮೃತವರ್ಷಿಣಿ.

೪೨. ಸದಾಶಿವ ಭಟ್ಟ. ಡಿ. ೨೦೦೧, ಕವನಾಂಸೋರು, ಪ್ರಕಾಶಕರು: ಕರ್ಹಾಡ ಬ್ರಾಹ್ಮಣ ಅಭ್ಯುದಯ ಸಂಘ (ರಿ) ಅಗಲ್ಪಾಡಿ.

೪೩. ಹು.ಗು. ಬೆಂಗೇರಿ, ಪ್ರಾಕೃತ ಪದಕೋಶ, ಶಾರದಾ ಪ್ರಕಾಶನ, ಅರಳೆಪೇಟೆ, ಬೆಂಗಳೂರು.

೪೪. ರಮೇಶ. ಕೆ.ವಿ.೧೯೮೯, ತುಳುನಾಡಿನ ಇತಿಹಾಸ, ಉಡುಪಿ: ರಾಷ್ಟ್ರಕವಿ ಗೋವಿಂದ ಪೈ, ಸಂಶೋಧನಾ ಕೇಂದ್ರ ಮತ್ತು ಮೈಸೂರು ಗೀತಾ ಬುಕ್ ಹೌಸ್.

೪೫. ಸದಾಶಿವ ಭಟ್. ಡಿ. ಮಗ್ಗುಂಚಲೆ ಕೋಣ (ಅಪ್ರಕಟಿತ ಸಾಮಾಜಿಕ ಸಂಗೀತ ನಾಟಕ) (ಬೇಡುವವರು ಯಾರು?)

೪೬. ತಿಪ್ಪೇರುದ್ರ ಸ್ವಾಮಿ ಎಚ್. ೧೯೯೨, ಕರ್ಣಾಟಕ ಸಂಸ್ಕೃತಿ ಸಮೀಕ್ಷೆ, ಡಿ.ವಿ.ಕೆ. ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು-೪.

೪೭. ಸೀತಾರಾಮಾಚಾರ್ಯ ನಾರಾಯಾಣಾಚಾರ್ಯ ಉಡುಪ, ೧೯೭೦, ಇತಿಹಾಸದ ಯಥಾರ್ಥತೆ, ಪ್ರಕಾಶಕರು: ಸೀತಾರಾಮಾಚಾರ್ಯ ನಾರಾಯಾಣಾಚಾರ್ಯ ಉಡುಪ, ಉಡುಪಿ, ದ.ಕ.

೪೮. ಶಾಮರಾಯ. ತ.ಸು:೨೦೦೦, ವಚನ ಭಾಗವತ, ಶ್ರೀ ರಾಮಕೃಷ್ಣ ಆಶ್ರಮ, ಮೈಸೂರು-೨೦

೪೯. ವೈ.ಎಸ್.ವಿ.ಭಟ್ (ಪ.ಸಂ) ೧೯೯೦, ಗಡಿನಾಡ ಕಿಡಿ, ಲಲಿತ ಕಲಾಸದನ (ರಿ), ಕಾಸರಗೋಡು-೧.

೫೦. ರಾಧಾಕೃಷ್ಣ ಬೆಳ್ಳೂರು ೨೦೦೧, ಕಾಸರಗೋಡಿನ ಕರ್ಹಾಡ ಉಪಭಾಷೆ, ಕರ್ಹಾಡ ಬ್ರಾಹ್ಮಣ ಅಭ್ಯುದಯ ಸಂಘ (ರಿ) ಅಗಲ್ಪಾಡಿ.

## ೩. ಗಾದೆಗಳು

೧. ಮ್ಯೆಯೇನೆ ಹನೆ ಲಿಕ್ಕೊನು ದೇರಪ

[ಅತ್ತೆ ಹಾನೆ ಅಡಗಿಸಿ ಇಡುವುದು]

೨. ಉದಕ್ಕಾನು ನಾಖ ಬೂಡೇನತ್ಥಿಲ್ಲೊಲೊ

[ನೀರಿನಲ್ಲಿ ಉಗುರು ಮುಳುಗಿಸದಿದ್ದವ]

೩. ಶಿಯಾಕ ಉಜೊ ತಪ್ಪೇಲ್ಲಸ

[ಚಳಿಗೆ ಬೆಂಕಿ ಕಾಯಿಸಿದ ಹಾಗೆ]

೪. ಕುಬಳಾರಿ ದೇರ್ಲಂ ಕುವಾಳಸಂ

[ಮಾಡಿನ ಮೇಲಿಟ್ಟ ಕುಂಬಳಕಾಯಿಯ ಹಾಗೆ]

೫. ತುಕ್ಕ ಇಚ್ಚ ನಿಂಬಾಯಾ ಭಜ್ಜಂ

[ನಿನಗೆ ಯಾಕೆ ನಿಂಬೆಹಣ್ಣಿನ ಉಪ್ಪಿನಕಾಯಿ]

೬. ಮುಯ್ಯೆಕ ಇಚ್ಚ ಲೊಖ್ಖಂಡಾ ವ್ಯಾಪಾರು

[ಇರುವೆಗೆ ಎಂತದಕ್ಕೆ ಕಬ್ಬಿಣದ ವ್ಯಾಪಾರ]

೭. ಅಂಬಟ ಖಲ್ಲಾಕ ಗಳ್ಯಾಂನ್ನು ಭಜ್ಜರ

[ಹುಳಿ ತಿಂದವನಿಗೆ ಗಂಟಲು ಸುಟ್ಟ ಹಾಗೆ]

೮. ಉಂದಿರಾಕ ಉಡ್ಕೇಲ್ಲೋ ಗಣೇಶಾಕ ಲಾಗಲೋ

[ಇಲಿಗೆ ಬಿಸಾಡಿದ್ದು ಗಣೇಶನಿಗೆ ತಾಗಿತು]

೯. ತಾಡಾ ಅಡ್ಯೇಕ ತಾಕ ಪೀಲ್ಲಸ

[ತಾಳೆಮರದ ಅಡಿಯಲ್ಲಿ ಮಜ್ಜಿಗೆ ಕುಡಿದ ಹಾಗೆ]

೧೧. ಕುಂಭಾರಾಂ ಕರಿಂ ಗೆಲ್ಲೆರಿ ಬಾಣಾಂ ಡಾಳೋ

[ಕುಂಭಾರನಲ್ಲಿಗೆ ಹೋದರೆ ಮಡಿಕೆಗಳ ಸಿಕ್ಕು]

೧೨. ಕಾಫೀನ್ನು ಪಳ್ಳೊ ಮೂಸು ಸೋ

[ಕಾಫಿಯಲ್ಲಿ ಬಿದ್ದ ನೊಣದ ಹಾಗೆ]

೧೩ ಉಚ್ಚೀ ವರ್ಚೆಂ ಮ್ವೋವಂ ಬಂದಿಲ್ಲಸ

[ಕಬ್ಬಿನ ಮೇಲೆ ಜೇನು ಕಟ್ಟಿದ ಹಾಗೆ]

೧೪. ಕಶಾ ವೆತ್ತ್ಣಣ ಗಾಯಧಾರ ಕಡ್ಡಾ ವೆತ್ತ್ಣಣ ಬೈಲು

[ಹೂಳಲು ಹೋದಾಗ ದನ ಕರಿಯಲು ಹೋದಾಗ ಎತ್ತು]

೧೫. ತೂಸಾ ದೋರ್‍ಯೇನೆ ಬಂದಪ

[ಉಮಿಯ ಹಗ್ಗದಲ್ಲಿ ಕಟ್ಟಿದ ಹಾಗೆ]

೧೬. ಗಳಾಕ ಸುತ್ತ ಜೇಬ

[ಕುತ್ತಿಗೆಯ ಸುತ್ತ ನಾಲಗೆ]

೧೭. ಅಮ್ಮಣ್ಣಾ ಗಲ್ಲೇರಿ ಬಮ್ಮಣಾ ನಾ, ಬಮ್ಮಣಾ, ವಾಳ್ಯೇರಿ ಅಮ್ಮಣಾನಾ

[ಹೆಪ್ಪು ಹಾಕಿದರೆ ಗಂಡನಿಗಿಲ್ಲ, ಗಂಡನಿಗೆ ಹಾಕಿದರೆ ಹೆಪ್ಪಿಗಿಲ್ಲ]

೧೮. ನಕ್ಕ ನಕ್ಕ ಮಣ್ಣು ಸಾತ ಸಂದಣ ಖಲ್ಲಿಂ ಮ

[ಬೇಡ ಬೇಡ ಹೇಳಿ ಏಳು ಸೆಖೆರೊಟ್ಟಿ ತಿಂದ]

೧೯. ಬಮ್ಮಣು ಕಪ್ಪಡ ಹಡ್ರ ಮ್ಹಣ್ಣು ನೇಶಿಲ್ಲಂ ಭಜ್ಜಿಲ್ಲಂ

[ಗಂಡ ಪಟ್ಟೆ ಸೀರೆ ತರ್‍ತಾರೇಂತ ಹೆಂಡತಿ ಉಟ್ಟ ಸೀರೆ ಸುಟ್ಟಳಂತೆ]

೨೦. ಹಕ್ಕಡಾಂತ ಘರಾ ಘವನು ಢೊಂಪಳೆದಲ್ಲೆ ಅವುಂಥಿ ಕೈಲೀ ಢೋಂಪುಳೊ

[ಎಲ್ಲರ ಮನೆಯ ದೋಸೆ ತೂತಾದರೆ ನಮ್ಮ ಮನೆಯ ಕಾವಲಿ ತೂತು]

## ೪. ಒಗಟುಗಳು

1. ಮತ್ತೈ ಅಡ್ಶೈ ರಗಿತಾ ಖಾಂಡ (ತಂಬಿಡಂ ಕಳಂಗ)
   [ಮಣ್ಣಿನ ಅಡಿಯಲ್ಲಿ ರಕ್ತದ ಮುದ್ದೆ (ಕೆಂಪು ಗೆಣಸು)]

2. ಮತ್ತೈ ಅಡ್ಶೈ ಭಂಗಾರಾಡಾಯೆ (ಹೊಳದಿ)
   [ಮಣ್ಣಿನ ಅಡಿಯಲ್ಲಿ ಚಿನ್ನದ ಗಟ್ಟಿ (ಹಳದಿ)]

3. ಅಜ್ಜ್ಯೇಕ ಖೆದ್ದಳಿಂ ಖರ್ಜು (ಕಾರಾತ)
   [ಅಜ್ಜಿಗೆ ಯಾವಾಗಲೂ ತುರಿಕೆ (ಹಾಗಲಕಾಯಿ)]

4. ಅಪ್ಪ ಪಾತಾಳನ್ನು ಅಮ್ಮ ಆಕಾಶಾರಿ, ಅಕ್ಕು ಹರ್ಡಿಕೆ ಘರಾಣೆ ಅಣ್ಣಾ ಅಂಗಡೀನ್ನು (ಮಡ್ಶೈಮೂಳ, ತಾಳ, ಭಿಂಗಾರ, ಫೊಪ್ಪಳಂ)
   [ಅಪ್ಪ ಪಾತಾಳದಲ್ಲಿ ಅಮ್ಮ ಆಕಾಶದಲ್ಲಿ ಅಕ್ಕ ಮದುವೆ ಮನೆಯಲ್ಲಿ ಅಣ್ಣ ಅಂಗಡಿಯಲ್ಲಿ (ಅಡಿಕೆ ಮರದ ಬುಡ, ತುದಿಂ ಹಿಂಗಾರ (ಅಡಿಕೆ)]

5. ಹಲ್ಲೇಲ್ಯ ಮಡ್ಯಾರಿ ಪಿಕ್ಕಲ್ಲಿ ಫೊಪ್ಪಳ (ಬೆಕ್ಕಳಂ)
   [ಅಲುಗಾಡಿಸುವ ಮರದಲ್ಲಿ ಹಣ್ಣಾದ ಅಡಿಕೆ (ಕಿವಿಯ ಒಂದು ಆಭರಣ)]

6. ಏಕು ಬ್ರಾಹ್ಮಣು ಬಸುಮು ಸಾರೋನು ಮೂಲಾನ್ನು ಭಡ್ಕಿಲೊಟ್ಟ (ಕುವಾಳ)
   [ಒಬ್ಬ ಬ್ರಾಹ್ಮಣ ವಿಭೂತಿ ಸಾರಿಸಿ ಮೂಲೆಯಲ್ಲಿ ಕುಳಿತಿದ್ದಾನೆ (ಕುಂಬಳಕಾಯಿ)]

7. ಏಕ ಪಕ್ಷಿ ಗಾಂವುಂ ಇಡೀ ಪಳೇರ (ದೋಳೋ)
   [ಒಂದು ಹಕ್ಕಿ ಊರು, ಇಡೀ ನೋಡುತ್ತದೆ (ಕಣ್ಣು)]

8. ಕುಂಭಾರಾಥ್ಯ ಘರಾಣೆ ಅರ್ಧ ತಜ್ಜ ಅರ್ಧ ಹಸ್ತಿನಾವತೀನ್ನು ತೇಂದೊನ್ನಿಲೆ ಕೂಣ್ಣು ಲಂಕೇನ್ನು ಅತ್ಸರ (ಕುಂಭಕರ್ಣ)
   [ಕುಂಭಾರನ ಮನೆಯಲ್ಲಿ ಅರ್ಧ, ಅದರ ಅರ್ಧ ಹಸ್ತಿನಾವತಿಯಲ್ಲಿ ಅದು ಎರಡೂ ಸೇರಿ ಲಂಕೆಯಲ್ಲಿ ಇದೆ (ಕುಂಭಕರ್ಣ)]

9. ದೋ ಉಗ್ರಾಣಾಂಕ ಏಕ ಬೀಗ (ಬುಲಾಕ್)
   [ಎರಡು ಉಗ್ರಾಣಕ್ಕೆ ಒಂದು ಬೀಗ (ಮೂಗಿಗೆ ಹಾಕುವ ಆಭರಣ)]

## ೫. ಶಿಶುಗೀತೆ

1. ಡೇಲೋ ಬಾಳಾ

ಡೇಲೋ ಬಾಳಾ ಡೇಲೋ
ಅಣೇಕು ತಂಬ್ಯೋ ತೇಲ
ತೆಲ್ಲಾ ಗೆಲ್ಲೊ ಬಪ್ಪಲ್ಲ್ಯೊ
ತೇಲ ಹಳ್ಳಂ ತಂಬ್ಯಾಂನ್ನು
ಪೊಪ್ಪಯ್ಯೊ ಕೆಲ್ಲೆ ಅಮ್ಮಿ ತಪ್ಪಂಲ್ಲ್ಯೋ
ಶಿಕ್ಕಿನಿ ದೇರ್ಲ್ಲು ಥಂಪಿಲ್ಲ್ಯೊ
ಶಿಕ್ಕಿಚೆ ಹಿಲ್ಲೆ ಉಂದಿರೆ
ಹತ್ತೀಚೆ ಹಿಲ್ಲೆ ಕೌಳೆ
ಕಾ ಕಾ ಕೌಳ್ಯಾ
ಕೌಳ್ಯಾ ಧರುಂ ಎಕ್ಕಲ್ಲೊ
ಪರಸುವಿ ಅಂಬೊ ಪಿಕ್ಕಲ್ಲೊ
ಪರಸುವಿ ಅಂಬಾ ಪೇಶಿ
ಬಾಳೇನ ಅಠೇಲ್ಲಿ ಮೈಶಿ.

2. ದೇವರ ನಾವು

ಕಾರ್ತಿಕಾ ಅಮಾಸಾ
ತೊಳಶಿಚ್ಚಿ ಶೇವರ್ನ
ಆಲೆ ವೃಂದಾವನಂ
ತುಳಸಿ ದೇವಿ
ತೆತ್ತೀಸ ಕೋಟಿದೇವ
ಆಲೆಚ್ಚಿಲಾ ಓರಿ
ಕಮಲಿಂಪೂದ ಕರಿ
ಕೃಷ್ಣ ದೇವು
ಕೃಷ್ಣ ರುಕುಮಿಣಿ
ನವರಾ ನವರಿಂ
ಅಯ್ಯಪ್ಪಾ ಮಂದಿರಿಂ
ಆರೂಢಾ ಖೇಳು
ರುಕ್ಮಿಣೆನಿ ಕೃಷ್ಣು
ತೀಂ ದೊಗ್ಗೆಲ ಸಹಪಾಠಿ.
ತೊಳಸೀಲ್ಲಿ ಆರತಿ ಉವಾಳಿಲಿ

## ೬. ಚುಟುಕು

**ಕರ್ಮದೋಷು:**

ಬಸ್ಸಾರಿ ಭೆಡ್ಕಿಲ್ಲೆ ಥೊಗಡಾಂಕ ನೀದ
ಅಶೀ ಅಶೀ ಅಚ್ಛಿಲ್ಲೆಲಾಂಕ ಘನ ಬಾಧ
ಜ್ಹಗಡೇನ ನಿದ್ದೇನೆ ಮುರ್ಖಾಂತೊ ದೀಸು
ವೇರಮ ಸುಭಾಷಿತಕಣೇ ಕರ್ಮದೋಷು

("ಕವನಾಂ ಸೋರು" ಕವನ ಸಂಕಲನ ಡಾ. ಡಿ. ಸದಾಶಿವ ಭಟ್ ಪು. ೨೪)

**ಮತ್ಥೊ ಪೂತು:**

ಮುಕ್ಕ ಅತ್ಸಪ ಎಕ್ಕೂಚಿ ಪೂತು
ದೀಸಗೆಲ್ಲಸಂ ದಾರ ಮ್ಹಾರಿಪೂತು
ಅವಯೀಕ ತಾಜ್ಜರಿ ಕೊಂಡಾಟ ಭರ್ತಿ
ತೆಕ್ಕಾಚಿ ಓ ಸವರ್ೈಲೆ ಭರ್ತಿ

(ಮಧು ಪಡ್ರೆ, ಕರ್ಹಾಡ, ಸಂ.೩ ಅಕ್ಟೋಬರ್೨೦೦೪ ಸಂಚಿಕೆ ೧೧ ಪು.೮ )

**ಮತ್ಥಿಲಿ :**

ಉಡ್ಕತಣ ಭಡ್ಕತಣ ದೂರಂ
ಅಂಗಿ ಘತ್ತಣ ಮ್ಹಂಡ್ರು ಹ್ಹಾಂವ್ಯೆಲೆ ಏರಂ।
ಅಸಂಕ್ ಮ್ಹಂಡ್ರು ನಿತ್ಯೆಲೆ ಮ್ಹತ್ಥಿ ಯಜಮಾಂತಿ
ಹುಳೂ ಸಂಗರಂ ಭಾವ ಕಳ್ಳೆ ಜಾಳೇಂತಿ ॥

(ಕರ್ಹಾಡ ಮಾಸಪತ್ರಿಕೆ ರಾಮಣ್ಣ ಚೆನ್ನಂಗೋಡು ಸಂ.೩ನವರಿ೦೨.ಪು.೭)

**ಮಹಿಳಾ ವಿಕಾಸು:**

ಸುರುದೌನು ಪಡ್ಹಾನ್ನು। ಮಹಿಳಾ ವಿಕಾಸು
ಅಣಿಪುಳ್ಳೆಂ ಚೆಡ್ವಾಂಕ ನಾ ಪೆಜ್ಜೆಗಾಸು
ಅಚ್ಛಾಕನಾಂತಿ ಎಪ್ಪರ್ೈಲೆ ಘೊರೋನ್ನು
ಬರ್ಕತ್ತು ನಾ ಔಂಜ ಹಂಚಾ ಹತ್ತಾನ್ನು

(ಕರಾಡ ಮಾಸಪತ್ರಿಕೆ, ಮಧು ಪಡ್ರೆ, ಸಂ.೬ ಎಪ್ರಿಲ್ ೨೦೦೨ .ಪು.೯)

**ಕೇಡ :**

ತತ್ಥಂ ಉಲ್ಲಣೆಂ ಐಕ್ಕ ತೇಂ ಕಿತ್ತು ಗೋಡ
ರಾಮು ರಾಮಾ ರೋಮು ರೋಮಾನ್ನು ಕೇಡ
ರೋಕ ದಲ್ಲಲಂ ಕಳ್ಳೆ ಬೇಜಾರ ಕರ್ರು
ಪೊಟ್ಟಾ ಬಜ್ಜಾನ್ನೂಚಿ ಪಡ್ವಣ್ಣು ಮರ್ರು

(ಕರ್ಹಾಡ ವಿಶೇಷಾಂಕ ರಾಮಣ್ಣ ಚೆನ್ನಂಗೋಡು ನವೆಂಬರ್ ೨೦೦೨ ಪು. ೪೨)

**ಹಾಲಾಂತು ಹರ್ಡಿ:**

ಹಾಲಾನ್ನು ಹರ್ಡಿದಲ್ಲೆರಿ ಕಶ್ಯಂ ದಾರ?
ಜವಣಾಚ ಸಮಯಾಕ ದಂತಂ ಜನ ಏರ।
ಹಾತು ಧುಲ್ಲಸಂ ಥ್ಯೆಂಟುಂ ಜನ ಪೂರ್ತಿವೇರಿ
ಹೊರತು ಹೊಕ್ಕಲ ಚ್ಛವಗದಣ ಬಾಕಿದಾರಿ॥

(ರಾಮಣ್ಣ ಚೆನ್ನಂಗೋಡು)

# ಕಾಸರಗೋಡು ಜಿಲ್ಲೆ



N
KASARAGOD DISTRICT
MANJESHWARA
BANTWAL
BAYAR
UPPALA
KARNATAKA
PUTTUR
SULLIA
PERLA
PADRE
NIDPALLI
KUMBLA
AGALPADY
MULLERIA
TAIRE
KANNUR
1. BAYAR
2. PADRE
3. AGALPADY
4. NIDPALLI
5. SULLIA
6. TAIRE
S

